# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'
ಸಂಚಾಲಕರು : ನಾಗಿರೆಡ್ಡಿ

ವರ್ಣಚಿತ್ರ ಧಾರಾವಾಹಿಯಾಗಿ ಹರಿದ "ವಿಘ್ನೇಶ್ವರ" ಪುರಾಣ ಕಥೆಗಳು ಈ ಸಂಚಿಕೆಯಲ್ಲಿ ಸಮಾಪ್ತಿಯಾಗುತ್ತಿದೆ. ಇದು ಅನೇಕರನ್ನು ಕೌತುಕಪೂರ್ಣ ಸಂತೋಷಕ್ಕೆ ಈಡು ಮಾಡಿ ತೆಂಬುದು ನಮ್ಮ ಗಮನಕ್ಕೆ ಬಂದಿದೆ. ಅದೇ ರೀತಿಯ ಆಕರ್ಷಣೆಗಳಿಂದ "ವಿಷ್ಣುಕಥೆ" ಎಂಬ ಪೌರಾಣಿಕ ಆಖ್ಯಾಯಿಕೆಗಳ ಧಾರಾವಾಹಿ ಮುಂದಿನ ಸಂಚಿಕೆಯಿಂದ ಹರಿಯ ತೊಡಗುತ್ತದೆ.

## ಅಮರವಾಣಿ

ಯಸ್ಮಿನ್ ಜೀವತಿ ಜೀವಂತಿ ಬಹವಃ ಸ ತು ಜೀವತು
ಕಾಕೋಽಪಿ ಕಿಂ ನ ಕುರುತೇ ಚಂಚ್ವಾ ಸ್ವೋದರ ಪೂರಣಮ್

ಯಾವನು ಜೀವಿಸಿಕೊಂಡಿದ್ದರೆ ಅನೇಕ ಮಂದಿಗೆ ಸುಖಜೀವನವು ಲಭ್ಯವಾಗುವುದೋ ಅವನು ಜೀವಿಸಿರಬೇಕು. ಅಲ್ಲದೆ ಕಾಗೆಯಂತೆ ತನ್ನ ಹೊಟ್ಟೆ ತುಂಬುವುದೇ ಸರ್ವಸ್ವವೆಂದು ಕೊಳ್ಳುವವನು ನೂರುವರ್ಷ ಬದುಕಿದರೂ ಪ್ರಯೋಜನವಿಲ್ಲ.

ಸಂಪುಟ : ೨೦ ಜನವರಿ '೮೩ ಸಂಚಿಕೆ : ೧

ಬಿಡಿ ಪ್ರತಿ ರೂ. ೧-೭೫ : : ವಾರ್ಷಿಕ ಚಂದಾ ರೂ. ೨೧-೦೦





# ಕಾಣದ ಪಿಶಾಚಿ

**ಒಂ**ದು ಊರಲ್ಲಿದ್ದ ಗೋಪಾಲನೆಂಬವನಿಗೆ ಪಟ್ಟಣದ ಒಂದು ಕಚೇರಿಯಲ್ಲಿ ಕೆಲಸ ಸಿಕ್ಕಿತ್ತು. ದಿನಾ ಬೆಳಿಗ್ಗೆ ಮನೆಯಿಂದ ಹೊರಟು ಕಾಡಿನ ದಾರಿಯಲ್ಲಿ ಪಟ್ಟಣಕ್ಕೆ ಹೋಗಿ ಕೆಲಸ ಮುಗಿಸಿಕೊಂಡು ಮತ್ತೆ ಮನೆಗೆ ಹಿಂದಿರುಗುವಾಗ ರಾತ್ರಿಯಾಗುತ್ತಿತ್ತು. ಅವನಿಗೆ ಸಿಗುವ ಸಂಬಳದಲ್ಲಿ ಪಟ್ಟಣದಲ್ಲೇ ಮನೆ ನೋಡಿಕೊಂಡಿರಲು ಸಾಧ್ಯವಿದ್ದಿಲ್ಲ. ಅವನ ಸಂಬಳದ ದೊಡ್ಡ ಭಾಗವನ್ನೇ ಬಾಡಿಗೆಗೆ ಕೊಡಬೇಕಾಗುತ್ತಿತ್ತು. ಅಂತಲೇ ದಿನಾ ನಡೆಯುತ್ತ ಕಾಲು ಗಟ್ಟಿ ಮಾಡಿಕೊಳ್ಳುತ್ತಿದ್ದನು.

ಒಂದು ದಿನ ಅವನು ಕಾಡಿನ ದಾರಿಯಲ್ಲಿ ಬರುವಾಗ ದಾರಿಯ ಬದಿಯಲ್ಲಿರುವ ಮರಗಳ ಮೇಲೆ ಕೋತಿಗಳ ಗುಂಪೇ ಸೇರಿಕೊಂಡು ತುಂಬಾ ಗಲಾಟೆ ಮಾಡಿಕೊಂಡಿದ್ದುವು. ಅವುಗಳನ್ನು ನೋಡಿ ಗೋಪಾಲನು ಹೆದರಿ ಕಾಲುದಾರಿಯನ್ನು ಬಿಟ್ಟು ಅಡ್ಡದಾರಿಯನ್ನು ಹಿಡಿದು, ದಾರಿದಿಕ್ಕುಗಳಿಲ್ಲದ ಕಾಡಿನೊಳಗೆ ಎಲ್ಲೆಲ್ಲೋ ಸುತ್ತಿ ಹೇಗೆಹೇಗೋ ನಡೆದನು. ಕಡೆಗೆ ಸೂರ್ಯಾಸ್ತವಾಗಿ ಕತ್ತಲೆಯೂ ಕವಿಯುತೊಡಗಿತು.

ಒಂದು ಕಡೆಯಲ್ಲಿ ಗೋಪಾಲನಿಗೆ ಅರ್ಧದ ವರೆಗೆ ಸುಟ್ಟು ಕರ್ರಗಾದಂತಿದ್ದ ಒಂದು ಮರವು ಕಂಡಿತು. ಆದರ ಕೊಂಬೆಗಳಲ್ಲಿ ಒಂದು ಎಲೆಯೂ ಇಲ್ಲದೆ ಪೂರ್ತಿ ಬೋಳಾಗಿದ್ದಿತು. ಅದು ಮರವೋ ಪಿಶಾಚಿಯೋ ಅನಿಸಿ ಹೆದರಿ ನಡುಕ ಬಂತು. ಅವನಿಗೆ ಪಿಶಾಚಿಗಳೆಂದರೆ ಕೆಟ್ಟ ಭಯ. ಆದರೆ ಕೆಲವು ಪಿಶಾಚಿಗಳು ಕೇಡು ಮಾಡುವುದಕ್ಕೆ ಬದಲಾಗಿ ಒಳ್ಳೆಯದು ಮಾಡುತ್ತವೆಂದು ಕೇಳಿದ್ದನು, ಹೆದರಿದವರನ್ನಷ್ಟೇ ಅವು ಹೆದರಿಸುವುದಂತೆ. ಆದುದರಿಂದ ಅವನು ಸ್ವಲ್ಪ ಧೈರ್ಯ ತಂದುಕೊಂಡನು.

ವಿಕೃತವಾಗಿರುವ ಆ ಮರವನ್ನು ನೋಡಿ ಗೋಪಾಲನು ಪಿಶಾಚಿ ಎಂತಲೇ ಭ್ರಮಿಸಿ ತನ್ನ ಎರಡು ಕೈಗಳನ್ನೂ ಜೋಡಿಸಿ, “ಓ ! ಪಿಶಾಚೀ ! ನೀನು ಒಳಿತು ಮಾಡುವ ಪಿಶಾಚಿಯೋ ಎಂದು ನಂಬುತ್ತೇನೆ. ದೇವರನ್ನು ಬೇಡುವ ಹಾಗೆ ನಿನ್ನನ್ನು ಬೇಡುತ್ತೇನೆ. ನನಗೆ ಕೇಡು ಮಾಡುವುದರಿಂದ ನಿನಗೆ ಸಿಗುವ ಲಾಭವೇನೂ ಇಲ್ಲ. ಅದಕ್ಕೆ ಬದಲಾಗಿ ಬಡವನಾದ ನನಗೆ ಒಂದಿಷ್ಟು ಹಣವೋ ಧನವೋ ಕೊಡು. ನಿನ್ನ ಹೆಸರು ಹೇಳಿಕೊಂಡು ಸುಖವಾಗಿ

ಎಂ. ಕೆ. ಈಶ್ವರರಾವ್

ಬದುಕುತ್ತೇನೆ. ನಿನ್ನನ್ನು ಹೇಗೆ ಪೂಜೆ ನೈವೇದ್ಯ ಮಾಡಬೇಕೋ ಹೇಳು" ಎಂದನು.

ಅವನ ಮಾತು ಮುಗಿಯುವಷ್ಟರಲ್ಲಿ ಆ ಮರದ ಪೊಟರೆಯೊಳಗೆ ಏನೋ ಶಬ್ದ ವಾಯಿತು. ಗೋಪಾಲನು ಧೈರ್ಯದಿಂದ ಆ ಮರದ ಬಳಿಗೆ ಹೋಗಿ, ಎರಡಾಳು ಹಿಡಿಯುವಷ್ಟು ದೊಡ್ಡದಾದ ಆ ಪೊಟರೆಯನ್ನು ಬಗ್ಗಿ ನೋಡಿದನು. ಅವನ ಕಣ್ಣುಗಳು ಇಷ್ಟಗಲವಾದುವು. ಅದರೊಳಗೆ ತುಂಬಾ ಚಿನ್ನದ ನಾಣ್ಯಗಳು! ಗೋಪಾಲನು ಸಂತೋಷದಿಂದ ಒಂದು ನಿಮಿಷ ಮೂರ್ಛಿತನಂತಾದನು.

ಗೋಪಾಲನು ಆತ್ಮಾತುರದಿಂದ ಅವುಗಳನ್ನು ಬಾಚಿ ಬಾಚಿ ತೆಗೆದು ತನ್ನ ವಸ್ತ್ರದಲ್ಲಿ ಹಾಕಿ ಮೂಟೆ ಕಟ್ಟಿ ಕೊಂಡು ಹೊರಟನು. ಅಲ್ಲಿಂದ ಮುಂದೆ ಹೋದ ಕೂಡಲೇ ಅವನ ಗುರುತಿನ ಮರವೂ, ಗುಡ್ಡವೂ ಕಂಡುಬಂದುವು. ಅದರಿಂದ ದಾರಿ ತಿಳಿದು, ನಡೆದು ಮಧ್ಯರಾತ್ರಿಯ ಸಮಯಕ್ಕೆ ಮನೆಗೆ ತಲಪಿದನು. ಬಾಗಿಲು ತಟ್ಟಿದ ಕೂಡಲೇ ಅವನ ಹೆಂಡತಿ ಗೋಮತಿ ಬಾಗಿಲು ತೆರೆದು, "ಇದೇನು? ಇವತ್ತು ಇಷ್ಟು ಹೊತ್ತಾಯಿತೇಕೆ? ನನಗೆ ಕಾದುಕಾದು ಸಾಕಾಯಿತು" ಎಂದು ಕೇಳಿದಳು.

"ಅದನ್ನೆಲ್ಲ ಆ ಮೇಲೆ ಹೇಳುತ್ತೇನೆ. ಮೊದಲು ಕುಡಿಯಲು ಸ್ವಲ್ಪ ನೀರು ತಂದುಕೊಡು" ಎಂದು ಗೋಪಾಲನು ಬೇಸರದಿಂದ ಹೇಳಿದನು.

ಹೆಂಡತಿ ಅಡಿಗೆ ಮನೆಗೆ ಹೋದಳು. ಅವಳ ಎಲುಬಿಲ್ಲದ ನಾಲಗೆಯಲ್ಲಿ ಸಾಸಿವೆಕಾಳು ನಿಲ್ಲುವಂತಿಲ್ಲ ವೆಂದು ಗೋಪಾಲನಿಗೆ ಗೊತ್ತು. ಗೋಪಾಲನು ಚಿನ್ನದ ನಾಣ್ಯಗಳಿರುವ ಮೂಟೆಯನ್ನು ಅಟ್ಟದ ಹಲಗೆಯ ಮೂಲೆಗೆ ಬಿಸುಟನು. ಕಾಡಿನಲ್ಲಿ ಕೋತಿ ಗಳಿಂದ ದಾರಿ ತಪ್ಪಿ, ಇಷ್ಟು ತಡವಾಯಿತೆಂದು ಹೆಂಡತಿಗೆ ಹೇಳಿ, ಹಾಸಿಗೆಯಲ್ಲಿ ಬಿದ್ದುಕೊಂಡನು.. ಬೆಳಗ್ಗಿನ ವರೆಗೂ ನಿದ್ದೆ ಬರಲಿಲ್ಲ. ಆ ಮೂಟೆಯಲ್ಲಿ



ಎಷ್ಟು ನಾಣ್ಯಗಳಿರಬಹುದೆಂದು ಮನಸ್ಸಿನಲ್ಲೇ ಅಂದಾಜು ಲೆಕ್ಕ ಹಾಕಿಕೊಳ್ಳುತ್ತಿದ್ದನು.

"ಇನ್ನೂ ನಿದ್ದೆ ಮಾಡದೆ ಹೊರಳುತ್ತಿದ್ದೀರಿ. ಏನಾಯಿತು? ಮೈಸರಿಯಿಲ್ಲವೆ?" ಎಂದು ಗೋಮತಿ ಕೇಳಿದಳು.

"ನೀನು ಹೀಗೆ ಮಾತಾಡಿಸಿದರೆ ನಿದ್ದೆ ಹೇಗೆ ಬಂದೀತು? ನೀನು ಬಾಯಿ ಮುಚ್ಚಿ ಸುಮ್ಮನೆ ಬಿದ್ದುಕೋ" ಎಂದು ಕೋಪದಿಂದ ಹೇಳಿದನು ಗೋಪಾಲ.

ಈವರೆಗೂ ತನ್ನ ಮೇಲೆ ರೇಗಿಬೀಳದ ಗಂಡ ಈ ದಿನ ಹೀಗೆ ಕೋಪದಿಂದಿರುವುದನ್ನು ನೋಡಿ ಗೋಮತಿಗೆ ಅಳು ಬರುವಂತಾಯಿತು.

ಬೆಳಗಾದ ಮೇಲೆ ಗೋಪಾಲನು ಪಟ್ಟಣಕ್ಕೆ ಹೋದನು. ಆದರೆ ತನ್ನ ಉದ್ಯೋಗದ ಕಚೇರಿಗೆ ಹೋಗದೆ, ಬಗೆಬಗೆಯ ವ್ಯಾಪಾರವನ್ನು ಕುರಿತು ಪರಿಚಯವಿರುವವರ ಬಳಿಗೆ ಹೋಗಿ, ಅವರನ್ನು



ಮಾತಾಡಿಸಿ, ವ್ಯಾಪಾರದ ಕೆಲವು ಸಂಗತಿಗಳನ್ನು ತಿಳಿದುಕೊಂಡನು. ಮುಖ್ಯವಾಗಿ ಪ್ರತಿಯೊಬ್ಬನೂ ವ್ಯಾಪಾರ ತೊಡಗಬೇಕಾದರೆ ಸಹಸ್ರ ಸಂಖ್ಯೆಯ ಮೂಲಧನ ವಿರಬೇಕೆಂದೇ ಹೇಳಿದರು. ಹೀಗೆ ಅವನು ವ್ಯಾಪಾರದ ಗುಂಗಿನಲ್ಲಿ ಏಳೆಂಟು ದಿನಗಳನ್ನು ಉದ್ಯೋಗಕ್ಕೆ ಹೋಗದೆಯೇ ಕಳೆದನು. ಕಡೆಗೆ, ಪಿಶಾಚಿ ಕೊಟ್ಟ ಧನವನ್ನು ಆಪತ್ತಿಗಷ್ಟೇ ತೆಗೆಯಬೇಕೆಂದೂ, ವ್ಯಾಪಾರಕ್ಕೆ ಬೇರೆ ಮೂಲ ಧನವನ್ನೇ ಸಂಪಾದಿಸಬೇಕೆಂದೂ ನಿಶ್ಚಯಿಸಿ. ಮತ್ತೆ, ಆ ಪಿಶಾಚಿ ಮರದ ಕಡೆಗೆ ಹೋದನು.

ಆ ಮರದ ಹತ್ತಿರ ಕೈ ಮುಗಿದು, "ಪಿಶಾಚ ಮಹಾನುಭಾವಾ! ನೀನು ಕೊಟ್ಟ ಹಣದಿಂದ ಏನು ಮಾಡುವುದೆಂಬ ಆಲೋಚನೆಯಲ್ಲಿ ರಜೆ ಹಾಕದೆ ದಿನ ಕಳೆದುದರಿಂದ ನನ್ನ ಉದ್ಯೋಗವು ಹೋಯಿತು. ಇನ್ನಿಷ್ಟು ಧನ ಕೊಟ್ಟು ನೀನೇ ನನ್ನ ಉದ್ಯೋಗ ಹೋದ ನಷ್ಟ ತುಂಬಿಸಲಾರೆಯಾ!" ಎಂದನು ದೀನನಾಗಿ. ಆಗಲೂ ಪೊಟರೆಯೊಳಗೆ ಸಪ್ಪಳ ಕೇಳಿಸಿತು. ಗೋಪಾಲನು ಬಾಗಿ ನೋಡಿದಾಗ, ಈ ಮೊದಲು ಸಿಕ್ಕಿದ ಧನದ ಅರ್ಧದಷ್ಟು ನಾಣ್ಯಗಳು ಅಲ್ಲಿರುವುದು ಕಂಡಿತು. ಕಾಣದ ಪಿಶಾಚಿಗೆ ಮನದಲ್ಲೇ ಸಾವಿರವಂದನೆ ಹೇಳಿಕೊಂಡನು. ಅದನ್ನೆಲ್ಲ ಬಾಚಿ ತಂದು ಹೆಂಡತಿಗೆ ತಿಳಿಯದ ಹಾಗೆ ಅಟ್ಟದ ಹಲಗೆಯ ಮೂಲೆಗೆ ಬಿಸುಟನು.

ಇಷ್ಟರವರೆಗೆ ತನಗೆ ದೊರಕಿದ ನಾಣ್ಯಗಳನ್ನು ರಾಶಿ ಹಾಕಿ ಲೆಕ್ಕಮಾಡಬೇಕೆಂದು ಅವನು ತವಕಿಸ ತೊಡಗಿದನು. ಆದರೆ ಮನೆಯಲ್ಲಿರುವ ಹೆಂಡತಿ ಆ ಕೆಲಸಕ್ಕೆ ಆತಂಕಳಾಗಿದ್ದಳು. ಎರಡು ಮೂರು ದಿನ ಕಳೆದ ಮೇಲೆ, ಹೇಗಾದರೂ ಹಣವನ್ನೆಲ್ಲ ಎಣಿಸಿ ಒಂದು ವ್ಯಾಪಾರ ತೊಡಗಬೇಕೆಂಬ ಆತುರತೆಯಲ್ಲಿ ಹೆಂಡತಿಯನ್ನು ನೋಡಿ, "ನಾಳೆ ನೀನು ನಿನ್ನ ತೌರು ಮನೆಗೆ ಹೋಗು. ಹೋಗದೆ ಬಹಳ ದಿನಗಳಾದುವಷ್ಟೆ? ಅವರನ್ನೆಲ್ಲ ನೋಡಬೇಕೆಂದು ನಿನಗೆ ಆಶೆಯಿದ್ದೀತು. ನಿದ್ದೆಯಲ್ಲಿ ಅಮ್ಮಾ ಅಂತ ಕನವರಿಸಿದಿಯಲ್ಲಾ!" ಎಂದನು.

ಅದನ್ನು ಕೇಳಿ ಹೆಂಡತಿ ಅಳುದನಿಯಿಂದ, "ನಾನೂ ನೋಡ್ತಾ ಇದ್ದೇನೆ. ನೀವು ಕೆಲವು ದಿನಗಳಿಂದ ಒಂದು ಥರಾ ಆಗಿದೀರಿ. ಇಷ್ಟರವರೆಗೆ ನನ್ನನ್ನು ಬಿಟ್ಟು ಇರಲಾರೆನೆಂದವರು ಈಗ ಹೋಗು ಅನ್ನುವಿರಾ? ಏನು ಭೂತ ಬಡೆದಿದೆಯೋ ನಿಮಗೆ" ಎಂದಳು.

ಗೋಪಾಲನಿಗೆ ಏನೂ ತೋರದೆ, ತನ್ನೊಳಗೇ ತಳಮಳಿಸಿಕೊಳ್ಳುತ್ತ, ರಾತ್ರಿಯಲ್ಲಿ ಅರೆಬರೆ ನಿದ್ದೆಯಲ್ಲಿರುವಾಗ ಕೋಣೆಯೊಳಗೆ ಏನೋ ಶಬ್ದವಾಯಿತು. ಅವನ ಇದಿರಿನಲ್ಲಿ ನಾಲ್ಕು ಪಿಶಾಚಿಗಳು! ಬಿಟ್ಟ ಕಣ್ಣು ಬಿಟ್ಟ ಹಾಗೆಯೇ ನೋಡಿದ.

"ಲೋ ಮನುಷ್ಯ! ನೀನು ನಮ್ಮ ಗೆಳೆಯನಿಂದ ಬಹಳ ಧನವನ್ನು ತಂದಿದ್ದೆಯಲ್ಲಾ? ಈಗ ನಮಗೆ

ಹಸಿವಾಗಿದೆ. ಒಳ್ಳೆಯ ಔತಣದ ಊಟ ನಮಗೆ ಹಾಕು. ನಾವು ಉಂಡು ಹೋಗಿ ಅವನನ್ನೂ ಕಳುಹಿ ಸುತ್ತೇವೆ" ಎಂದುವು ಪಿಶಾಚಿಗಳು ಉತ್ಸಾಹದಿಂದ

"ಔತಣವೇ? ಹಾಗೇನೂ ನಾನು ಹೇಳಲಿಲ್ಲ. ಗಲಾಟೆ ಮಾಡದೆ ಹೋಗಿ ಬಿಡಿ. ನನ್ನ ಹೆಂಡತಿಗೆ ನಿಮ್ಮನ್ನು ನೋಡಿದರೆ ಕೆಟ್ಟ ಭಯ! ಅವಳು ಸತ್ತುಗಿತ್ತರೆ ಆ ಪಾಪ ನಿಮಗೆ!" ಎಂದನು ಗೋಪಾಲ ಹೆದರುತ್ತಾ.

ಆ ಮಾತು ಕೇಳಿ ಪಿಶಾಚಿಗಳು ರೊಚ್ಚಿಗೆದ್ದು ಮನೆಯೊಳಗಿದ್ದ ವಸ್ತುಗಳನ್ನೆಲ್ಲಾ ಚೆಲ್ಲಾಪಿಲ್ಲಿ ಮಾಡಿದುವು. ಅಟ್ಟದ ಮೂಲೆಯಲ್ಲಿದ್ದ ಚಿನ್ನದ ನಾಣ್ಯಗಳ ಚೀಲಗಳನ್ನು ತೆಗೆದು ಮನೆಯೊಳಗೆಲ್ಲಾ ಚೆಲ್ಲಿ ಮಾಯವಾಗಿ ಹೋದುವು. ಆ ನಾಣ್ಯಗಳೆಲ್ಲಾ ಚೇಳುಗಳೂ, ಸರಸುರಿಗಳೂ ಆಗಿ ಗೋಪಾಲನ ಮೈ ಮೇಲೆ ದಾಳಿ ತೆಗಯಲು ಗೋಪಾಲನು ಕೆಟ್ಟದನಿಯಿಂದ ಅರಚಿದನು.

ಅವನ ಹೆಂಡತಿ ಗೋಮತಿ ಆಗ ತಾನೇ ನಿದ್ದೆ ಯಿಂದೆದ್ದು "ಏನಾಯಿತು? ಕೆಟ್ಟಕನಸು ಕಂಡಿರಾ? ನಾನು ಇಲ್ಲಿಂದ ಹೋದ ಹೊರತು ನಿಮಗೆ ಮನಃಶಾಂತಿ ಇಲ್ಲವೇ? ನಾಳೆಯೇ ತಾಯಿ ಮನೆಗೆ ಹೋಗುತ್ತೇನೆ" ಎಂದು ಏನೇನೋ ಹೇಳಿದಳು.

ಸ್ವಲ್ಪ ಹೊತ್ತಿಗೆ ಗೋಪಾಲನೂ ಧೈರ್ಯ ತಂದು ಕೊಂಡನು. ಈ ಮೊದಲು ತಾನು ಕಂಡುದೆಲ್ಲಾ ಭಯಂಕರವಾದ ಸ್ವಪ್ನವೆಂದು ತಿಳಿದನು. ಆ ಮೇಲೆ ಬೆಳತನಕ ನಿದ್ದೆಯೇ ಬರಲಿಲ್ಲ. ತನ್ನ ಈ ಅಶಾಂತಿಗೆ ಮೂಲಕಾರಣ ಅಟ್ಟದ ಹಲಗೆಯಲ್ಲಿರುವ ಚಿನ್ನದ ನಾಣ್ಯಗಳೇ. ಅವುಗಳನ್ನು ಒಯ್ದು ಮತ್ತೆ ಪಿಶಾಚಿ ಗಳಿಗೆ ಕೊಟ್ಟ ಹೊರತು ತನಗೆ ಮನಃಶಾಂತಿ ಇಲ್ಲವೆಂದು ತಿಳಿದನು.

ಮರುದಿನ ಕತ್ತಲೆಯಾಗುವ ಹೊತ್ತಿನಲ್ಲಿ ಹೆಂಡತಿ ನೀರು ತರಲು ಹೋದ ಸಮಯ ನೋಡಿ,



ಹಲಗೆಯ ಮೇಲಿರುವ ಧನವನ್ನೆಲ್ಲ ಎತ್ತಿಕೊಂಡು, ಕಾಡಿನಲ್ಲಿರುವ ಪಿಶಾಚಿ ಮರದ ಹತ್ತಿರಹೋದನು.

ಈ ಸಾರಿ ನಮಸ್ಕಾರವೇನೂ ಮಾಡದೆ, "ಸುಟ್ಟ ಮರವನ್ನು ಆಶ್ರಯಿಸಿಕೊಂಡಿರುವ ದೊಡ್ಡ ಮನಸ್ಸಿನ ಪಿಶಾಚಿಯೇ! ಇಗೋ ನೀನು ಕೊಟ್ಟ ಧನವೆಲ್ಲಾ ತಂದಿದ್ದೇನೆ. ಕಷ್ಟಪಡದೆ ಸಿಕ್ಕಿದ ಹಣದಿಂದ ಮನುಷ್ಯನಿಗೆ ಸುಖವೇನಿಲ್ಲ!" ಎಂದು ಹೇಳಿ ಚಿನ್ನದ ನಾಣ್ಯಗಳ ಗಂಟನ್ನು ಪೊಟರೆಯೊಳಗೆ ಬಿಸುಟನು.

ಆ ಕೂಡಲೇ ಪೊಟರೆಯೊಳಗಿನಿಂದ "ಯಾರೋನು?" ಎಂದು ನೋವಿನ ಕೆಟ್ಟದನಿಯ ದೊಡ್ಡ ಕೂಗೊಂದು ಕೇಳಿಸಿತು.

ಗೋಪಾಲನು ಆಶ್ಚರ್ಯದಿಂದ ಪೊಟರೆಯೊಳಗೆ ಬಗ್ಗಿ ನೋಡಿದನು. ಕಪ್ಪಗೆ ಧಷ್ಟಪುಷ್ಟನಾದ ಮನುಷ್ಯನೊಬ್ಬನು ತಲೆಯ ಮೇಲೆ ಕೈ ಒತ್ತಿ ಕೊಂಡು ನೋವನ್ನು ಅನುಭವಿಸಿಕೊಂಡಿದ್ದನು. ಇವನೆಲ್ಲಿಂದ ಬಂದನೆಂದು ಗೋಪಾಲನು ಬೆರಗಾಗಿ

ನೋಡುವಷ್ಟರಲ್ಲಿ, ಆ ಪ್ರಾಂತದ ಜಮೀನ್ದಾರರ ನೌಕರರಿಬ್ಬರು ಓಡುತ್ತಾ ಅಲ್ಲಿಗೆ ಬಂದು, "ಯಾರು ಹಾಗೆ ಸಾಯುವ ಕೂಗು ಕೂಗಿದ್ದು ?" ಎನ್ನುತ್ತ ಪೊಟರೆಯ ಬಳಿಗೆ ಬಂದು, ಅಲ್ಲಿ ನೋವಿನಿಂದ ನರಳುವವನನ್ನು ನೋಡಿ, "ಒರೇ! ನೀನೋ ಕಳ್ಳ ಕುಟ್ಟಾ ! ಜಮೀನ್ದಾರರ ಮನೆಯಿಂದ ಕದ್ದ ಸೊತ್ತನ್ನೆಲ್ಲ ಎಲ್ಲಿ ಅಡಗಿಸಿಟ್ಟಿದ್ದೀ, ಹೇಳು!" ಎಂದು ಅವನ ತೋಳು ಹಿಡಿದು ಹೊರಕ್ಕೆ ಎಳೆದರು.

ಆ ಕೂಡಲೇ ಪೊಟರೆಯ ಹಿಂಭಾಗದಲ್ಲಿದ್ದ ಬಿಲದೊಳಗಿನಿಂದ ದೊಡ್ಡದೊಂದು ಹೆಗ್ಗಣವು ಹೊರಗೆ ಹಾರಿ ಪೊದರಿನೊಳಗೆ ತೂರಿ ಮಾಯವಾಯಿತು.

ಗೋಪಾಲನು ಅದನ್ನು ನೋಡಿ ಆಶ್ಚರ್ಯಪಡುತ್ತ ಜಮೀನ್ದಾರರ ನೌಕರರೊಂದಿಗೆ, "ಈಗ ಗೊತ್ತಾಯಿತು. ಬಿಲದೊಳಗೆ ಅಡಗಿಸಿಟ್ಟ ಚಿನ್ನದ ನಾಣ್ಯಗಳನ್ನು ಹೆಗ್ಗಣವು ಈ ಪೊಟರೆಯೊಳಗೆ ಸೇರಿಸಿಡುವ ಕೆಲಸ ಮಾಡಿದೆ. ನಾನು ಇದೆಲ್ಲಾ ಪಿಶಾಚಿಯ ಕೆಲಸವೆಂದೇ ಅಂದುಕೊಂಡೆ" ಎಂದನು.

ನೌಕರನೊಬ್ಬನು ಗೋಪಾಲನ ತೋಳು ಹಿಡಿದು, "ಕಳ್ಳನ ನೆಂಟಾ ! ಕಟ್ಟುಕಥೆ ಹೇಳುವಿಯಾ ? ಜಮೀನ್ದಾರರ ಖಜಾನೆಯಿಂದ ದೋಚಿಕೊಂಡು ಬಂದವರು, ಈ ಕಳ್ಳಕುಟ್ಟನೂ ನೀನೂ! ನಡೆಯಿರಿ ಜಮೀನುದಾರರಲ್ಲಿಗೆ!". ಎಂದನು.

ಜಮೀನುದಾರರ ನೌಕರರು ಮರದ ಪೊಟರೆಯಲ್ಲಿ ಹುಡುಕಲು, ನಾಣ್ಯಗಳು ಮಾತ್ರವಲ್ಲದೆ ಕೆಲವು ಬೆಲೆ ಬಾಳುವ ಆಭರಣಗಳೂ ಸಿಕ್ಕಿದುವು. ಅವರು ಕಳ್ಳಕುಟ್ಟನನ್ನೂ ಗೋಪಾಲನನ್ನೂ ಜಮೀನುದಾರರಲ್ಲಿಗೆ ಕರೆದುಕೊಂಡು ಹೋದರು.

ಜಮೀನುದಾರರು ವಿಚಾರಣೆ ನಡೆಸಿ, ಹಳೆಯ ಕಳ್ಳನಾದ ಕುಟ್ಟನನ್ನು ಸೆರೆ ಮನೆಗೆ ಕಳುಹಿಸಿದರು. ಗೋಪಾಲನು ನಡೆದುದನ್ನೆಲ್ಲಾ ಹೇಳಿದನು. ಅದನ್ನು ಕೇಳಿ ಜಮೀನುದಾರರು, "ಅಂತೂ ಕಳವಾದ ಸೊತ್ತೆಲ್ಲಾ ನಿನ್ನಿಂದಲೇ ಮತ್ತೆ ದೊರಕಿತು. ನಿನಗೆ ಎಷ್ಟು ಬೇಕೋ ತೆಗೆದು ಕೋ. ಅದು ನನ್ನ ಬಹುಮಾನವೆಂದು ತಿಳಿ" ಎಂದರು.

ಗೋಪಾಲನು ವಿನಯದಿಂದ "ಮನುಷ್ಯರೊಳಗೆ ಹಣದ ಆಶೆ ಎಂಬ ಪಿಶಾಚಿ ಇದ್ದೇ ಇರುತ್ತದೆ. ಈ ಅನುಭವದಿಂದ ಆ ಕಾಣದ ಪಿಶಾಚಿಯನ್ನು ಹೇಗೆ ಅಡಗಿಸಬೇಕೆಂಬುದು ಗೊತ್ತಾಯಿತು. ನನಗೊಂದು ಸಣ್ಣ ಉದ್ಯೋಗ ಕೊಡಿಸಿದರೇ ಸಾಕು ಸ್ವಾಮಿ" ಎಂದನು.

ಆ ಮಾತಿಗೆ ಜಮೀನುದಾರರು ಸಂತೋಷಿಸಿ, ಅವನಿಗೆ ತಮ್ಮ ದಿವಾಣದ ಕಚೇರಿಯಲ್ಲಿ ಗಣಕನ ಉದ್ಯೋಗವನ್ನು ಕೊಟ್ಟು ಆದರಿಸಿದರು.








೧೪

[ಶಿವದತ್ತನೂ ಮಂದರದೇವನೂ ಪ್ರಯಾಣ ಮಾಡುತ್ತಿದ್ದ ದೋಣಿಗಳು ಯಾವುದೋ ಒಂದು ದ್ವೀಪವನ್ನು ತಲಪಿದುವು. ಆಗ ಎಲ್ಲಿಂದಲೋ ಹಾರಿಬಂದ ಒಂದು ಕಲ್ಲು ಒಬ್ಬ ಸೈನಿಕನನ್ನು ಹೊಡೆಯಿತು. ಮಂದರದೇವನು ಆ ಕಡೆಗೆ ಬಾಣಪ್ರಯೋಗ ಮಾಡಿದನು. ಕೂಡಲೇ ವಿಕೃತವಾದ ಆರ್ತನಾದವು ಉತ್ತರವಾಗಿ ಹೊರಟಿತು. ಬೆಳಗಾದ ಮೇಲೆ ನೋಡಿದಾಗ ಆ ಪ್ರದೇಶದಲ್ಲಿದ್ದ ಹುಲ್ಲು ಗಿಡಗಳ ಮೇಲೆಲ್ಲ ನೆತ್ತರಿನ ಕಲೆಗಳಿದ್ದುವು.]

**ಶಿ**ವದತ್ತನೂ,, ಮಂದರದೇವನೂ ಆ ರಕ್ತದ ಕಲೆಗಳು ಉದ್ದಕ್ಕೆ ಹೋಗಿರುವುದನ್ನು ಅತ್ಯಾತುರದಿಂದ ನೋಡಿ ದಂಗುಬಡಿದವರಂತಾದರು. ಸೈನಿಕರೂ ನಿರ್ವಿಣ್ಣರಾಗಿ ನೋಡಿದರು.

ರಾತ್ರಿ ತಮ್ಮ ಕಿವಿಗೆ ಬಿದ್ದ ವಿಕಾರವಾದ ಆರ್ತಧ್ವನಿ ಮನುಷ್ಯನದೇ ಎಂದು ಅರ್ಥವಾಯಿತು. ಆ ದ್ವೀಪದಲ್ಲಿ ಮನುಷ್ಯರಿದ್ದಾರೆಂಬುದಕ್ಕೆ ಅದು ಗುರುತಾಯಿತು. ಆ ಮನುಷ್ಯರು ಎಂಥವರೋ ? ಸಾಧಕರೋ. ಬಾಧಕರೋ ? ನಾಗರಿಕ ತಿಳಿದವರೋ. ಅನಾಗರಿಕ ನರರೂಪದ ಮೃಗಗಳೋ ? ಹಿಡಿದು ತಿನ್ನುವುದೊಂದೇ ಗೊತ್ತಿರುವ ರಾಕ್ಷಸರೋ ? ಹೀಗೆಲ್ಲಾ ಏನೇನೋ ಭಯಂಕರ ಸಂದೇಹಗಳು. ಉತ್ತರ ಕಾಣದ ಪ್ರಶ್ನೆಗಳು.

"ಅಂತೂ ಇದು ಮಾನವರಕ್ತವೆನ್ನಲು ಯಾವ ಸಂದೇಹವೂ ಇಲ್ಲ !" ಎಂದನು ಶಿವದತ್ತ ಹಾಗೆಯೇ ಆ ರಕ್ತವನು ಪರೀಕ್ಷೆ ಮಾಡುತ್ತ. ನಾನು ಅನುಮಾನಿಸಿದಂತೆ ಆ ವ್ಯಕ್ತಿಗಾಯಗೊಂಡಿದ್ದಾನೆಯೇ ಹೊರತು ಸಾಯಲಿಲ್ಲ. ಇಲ್ಲಿಂದ ಅವನು ಓಡಿ ತಪ್ಪಿಸಿಕೊಂಡಿದ್ದಾನೆ. ಇಲ್ಲೆಲ್ಲಾದರೂ ನಿಸ್ತ್ರಾಣವಾಗಿ ಬಿದ್ದಿರಲೂ ಬಹುದು. ಅಥವಾ ನಮ್ಮ ಮೇಲೆ ಘಾತಮಾಡಲು

ಹೊಂಚು ಹಾಕುತ್ತಿರಲೂ ಬಹುದು. ಯಾವುದಕ್ಕೂ ಸುತ್ತಲೂ ಸ್ವಲ್ಪ ಪರೀಕ್ಷಿಸಿನೋಡೋಣ" ಎಂದನು.

ಮಂದರದೇವ ಮತ್ತು ಮೂವರು ಸೈನಿಕರು ಒಂದುಕಡೆಗೂ, ಶಿವದತ್ತನೂ ಉಳಿದ ಮೂವರು ಸೈನಿಕರೂ ಇನ್ನೊಂದು ಕಡೆಗೂ ಮೆಲ್ಲಮೆಲ್ಲನೆ ಹುಡುಕುತ್ತಾ ಹೋದರು. ಮಂದರದೇವನು ಸ್ವಲ್ಪ ದೂರ ಹೋಗುವಷ್ಟರಲ್ಲಿ, ಅಲ್ಲೊಂದು ಪೊದರು ಕದಲುವ ಶಬ್ದ ಕೇಳಿಸಿತು. ತಾನು ಹುಡುಕುತ್ತಿರುವ ವಸ್ತು ಸಿಕ್ಕಿದಂತೆ ಅವನಿಗೆ ತೋರಿತು. ಅವನು ಆ ಪೊದರಿನ ಹತ್ತಿರ ಬೇಗ ಬೇಗನೆ ಹೋದನು. ಆಗ ಆ ಪೊದರನ್ನು ಅಲುಗಾಡಿಸಿಕೊಂಡಿದ್ದ ಪ್ರಾಣಿ ಮನುಷ್ಯನಲ್ಲವೆಂದು ಗೊತ್ತಾಗುವುದೂ, ಅಲ್ಲಿಂದ ಕಾಡು ಹಂದಿಯೊಂದು ಅರಚಿಕೊಂಡು ಮಂದರದೇವನ ಮೇಲೆ ಹಾರುವುದೂ ಒಮ್ಮೆಗೇ ನಡೆಯಿತು.

ಕಟ್ಟೆಚ್ಚರದಲ್ಲಿದ್ದ ಮಂದರದೇವನು ಆ ಹಂದಿಯನ್ನು ತಪ್ಪಿಸಿಕೊಂಡು ಕತ್ತಿಯಿಂದ ಅದರ ಮೇಲೆ ಬೀಸಿ ಹೊಡೆದನು. ಆ ಪೆಟ್ಟಿಗೆ ಕಾಡು ಹಂದಿಗೆ ದೊಡ್ಡ ಗಾಯವಾದರೂ, ಅದು ಮತ್ತಿಷ್ಟು ಜೋರಾಗಿ, ಅರಚುತ್ತ, ಹಿಂದಕ್ಕೆ ಹೊರಳಿ ಮತ್ತೆ ತಿರುಗಿ ಅವನ ಮೇಲೆ ಎಗರಿತು. ಅಷ್ಟರಲ್ಲಿ ಮಂದರದೇವನೊಂದಿಗಿದ್ದ ಸೈನಿಕರು ಅದನ್ನು ತಮ್ಮ ಕತ್ತಿಗಳಿಂದ ಛಡಮಡನೆ ಹೊಡೆದರು. ಅದು ಸಾವಿನ ನೋವಿನಿಂದ ಅರಚುತ್ತಾ ಬದಿಗೆ ಬಿದ್ದು, ಏಳಲಾಗದೆ ಹೊಡೆದು ಕೊಳ್ಳುತ್ತಾ ನೋಡುತ್ತಿದ್ದಂತೆ ಪ್ರಾಣಬಿಟ್ಟಿತು.

ಈ ಶಬ್ದವನ್ನು ಕೇಳಿ ಆ ಕಡೆಗೆ ಹೋಗಿದ್ದ ಶಿವದತ್ತನು ತನ್ನ ಸೈನಿಕರೊಂದಿಗೆ ಓಡುತ್ತಾ ಬಂದನು. ಸಾಯುತ್ತಾ ಬಿದ್ದಿರುವ ಕಾಡು ಹಂದಿಯನ್ನೂ, ಮಂದರ ದೇವಾದಿಗಳನ್ನೂ ನೋಡಿ, "ಅರೆ ! ಇಲ್ಲಿಯ ಕೂಗು ಕೇಳಿ, ನಿಮಗೇನೋ ಆಯಿತೆಂದು ಹೆದರಿ ಓಡೋಡಿ ಬಂದೆ. ಇಲ್ಲಿ ನಮ್ಮ ಹಸಿವಿಗೆ, ಗಮ್ಮತ್ತು ಮಾಡಿದಿರಾ ! ಭಲೆಭಲೆ!" ಎಂದನು ಶಿವದತ್ತ ನಗುತ್ತ.

"ಹೌದು ಹೌದು! ಇದಿರು ನೋಡದಂತೆಯೇ ದೇವರು ಆಹಾರ ದೊರೆಯುವಂತೆ ಮಾಡಿದ.



ಇತ್ತೀಚೆಗೆ ನಮಗೆ ಎಲ್ಲವೂ ಇದಿರು ನೋಡದಂತೆಯೇ ಆಗುತ್ತಿದೆ. ರಾತ್ರಿಯಲ್ಲಿ ನಮ್ಮ ಮೇಲೆ ಕಲ್ಲು ಬಿಸುಟ ಶತ್ರು ಯಾರೆಂಬುದು ಮಾತ್ರ ಗೊತ್ತಾಗಿಲ್ಲ. ಆ ವಿಷಯ ಮತ್ತೆ ನೋಡಬಹುದು. ಮೊದಲು ಹೊಟ್ಟೆ ತುಂಬಿಸಿಕೊಳ್ಳುವುದು ಒಳೆಯದೆಂದು ದೇವರ ಸೂಚನೆ" ಎಂದನು ಮಂದರದೇವನೂ ನಗುತ್ತ.

ಸೈನಿಕರು ಒಣಗಿದ ಉರುವಲುಗಳನ್ನು ತರಲು ಒಂದೊಂದು ದಿಕ್ಕಿಗೆ ಹೋದರು. ಅಷ್ಟರೊಳಗೆ ಮಂದರದೇವನೂ ಶಿವದತ್ತನೂ ದರಲೆ ಪುರಲೆಗಳನ್ನು ಕೂಡ ಹಾಕಿ, ಬೆಂಕಿ ಮಾಡುತ್ತಿರಲು, ಸೈನಿಕರೂ ಆ ಬೆಂಕಿಗೆ ಇನ್ನಿಷ್ಟು ಉರುವಲು ತಂದು ಹಾಕಿದರು. ಇನ್ನು ಹಂದಿಯನ್ನೆತ್ತಿ ಅದರ ನಡುವಿಗೆ ಹಾಕಬೇಕೆಂದಿರುವಾಗ, ಮತ್ತೇನೋ ಇದಿರು ನೋಡದ ಘಟನೆ ಅವರ ಹೊಟ್ಟೆಗೂ ಅಡ್ಡ ಬರುವ ಹಾಗೆ ತೋರಿತು. ಅವರೆಲ್ಲರ ಕರ್ಣಪುಟಗಳು ಒಡೆದು ಹೋಗುವಂತೆ ಭೀಕರವಾದ ಆರ್ತನಾದವೊಂದು ಕೇಳತೊಡಗಿತು.

ಶಿವದತ್ತನೂ ಮಂದರದೇವನೂ ಒಮ್ಮೆಗೇ ಎದ್ದು ಹಾರಿ ಕತ್ತಿ ಹಿಡಿದುಕೊಂಡು, ಆರ್ತನಾದವು ಹೊರಡುವ ಕಡೆಗೆ ಓಡಿದರು. ದೇವರು ಬಾಯಿಯ ಹತ್ತಿರ ತಿಂಡಿಯನ್ನು ತೋರಿಸಿ ಮರೆಮಾಡುತ್ತ ಆಟವಾಡಿಸುತ್ತಿದ್ದಾನೆನಿಸಿತು ಮಂದರದೇವನಿಗೆ. ಸ್ವಲ್ಪ ದೂರದಲ್ಲಿ ಅವರ ಕಣ್ಣಿಗೆ ಬಿದ್ದ ದೃಶ್ಯವು ವಿಪರೀತ ಭಯಾಶ್ಚರ್ಯಗಳನ್ನು ಹುಟ್ಟಿಸುವುದಾಗಿತ್ತು.

"ಅಯ್ಯಯ್ಯೋ! ನರವಾನರ! ನರವಾನರ!" ಎಂದು ಸೈನಿಕನೊಬ್ಬನು ಹೆದರಿ ಸಾಯುವ ಹಾಗೆ ಕೆಟ್ಟದನಿಯಿಂದ ಆರ್ತನಾದ ಮಾಡುತ್ತಿದ್ದನು. ಉರುವಲು ತರಲು ಹೋದ ಕೆಲಮಂದಿ ಸೈನಿಕರೂ ಗಾಬರಿಯಿಂದ ಅಲ್ಲಿಗೇ ಓಡಿಬರುತ್ತಿದ್ದರು.

ಅಲ್ಲಿ ನಡೆದುದೇನಂದರೆ, ಒಬ್ಬ ಸೈನಿಕನು ಒಣಗಿದ ಪುರಲೆಗಳನ್ನು ಹೆಕ್ಕಿಕೊಂಡಿದ್ದಾಗ, ಅಕಸ್ಮಾತ್ತಾಗಿ ಹಿಂದಿನಿಂದ ಬಲವಾದ ಎರಡು ಕೈಗಳು ಅವನ ಕಂಠ ಪ್ರದೇಶವನ್ನು ಹಿಡಿದುವು. ಅವನು ಉರುಳಾಡುತ್ತಾ ವಿಕಾರ ದನಿಯಿಂದ ಹಾಗೆ ಆರ್ತನಾದವೆಬ್ಬಿಸಿದ್ದನು.






“ನಮ್ಮ ಸೈನಿಕನನ್ನು ಹಿಡಿದ ಈ ಪ್ರಾಣಿ ನರವಾನರವೇ ನಿಜ” ಎಂದು ಮಂದರದೇವನು ಆ ವಿಕೃತಾಕಾರದ ಮೇಲೆ ಹೊಡೆಯಲು ಕತ್ತಿ ಎತ್ತಿದನು. “ತಾಳಿರಿ, ತಾಳಿರಿ! ಹಾಗೆ ಹೊಡೆದರೆ ಇನ್ನೂ ಅಪಾಯವೇ! ಅದಕ್ಕೆ ಇಮ್ಮಡಿ ಬಲ ಬಂದೀತು!” ಎಂದು ಶಿವದತ್ತನು ಹಿಂದಿನಿಂದ ಕೂಗಿ ಅವನನ್ನು ತಡೆದನು.

ಅಷ್ಟರಲ್ಲಿ ಸೈನಿಕನ ಕಂಠವನು ಹಿಡಿದಿದ್ದ ವಿಕೃತಾಕಾರದ ಪ್ರಾಣಿ ಅಲ್ಲಿಂದ ಓಡಿ ಹೋಗಲು ನೋಡಿತು. ಆಗ ಮೂವರು ಸೈನಿಕರೂ ಅದರ ಮೇಲೆ ಬಿದ್ದು ಉರುಳಾಡಿ, ಕಡೆಗೆ ಕಾಡು ಬಳ್ಳಿಗಳಿಂದ ಕದಲದಂತೆ ಅದನ್ನು ಕಟ್ಟಿ ಬಂಧಿಸಿ ಕೆಡವಿದರು.

“ಇದು ನರವಾನರವಲ್ಲ. ನೂರಕ್ಕೆ ನೂರು ಮಾನವ ಪ್ರಾಣಿಯೇ. ನರವಾನರವನ್ನು ಇಷ್ಟು ಸುಲಭದಲ್ಲಿ ಕಟ್ಟಲು ಸಾಧ್ಯವಾಗುತ್ತಿದ್ದಿಲ್ಲ. ಇವನು ಹೀಗಿರಲು ಏನೋ ಕಾರಣ ವಿರಬೇಕು. ಈ ಕಾಡಿನೊಳಗೆ ಇಂತಹ ಮನುಷ್ಯನೊಬ್ಬನು ಹೇಗೆ ಬಂದು ಸೇರಿದನೋ? ಮಾತಾಡಿಸಿದರೆ ಏನಾದರೂ ತಿಳಿಯಬಹುದು” ಎಂದನು ಶಿವದತ್ತ.

ಆಗ ಒಬ್ಬ ಸೈನಿಕನು ಆಶ್ಚರ್ಯದಿಂದ “ಇಲ್ಲಿ ನೋಡಿದಿರಾ. ಇವನ ಬಲಗೈಗೆ ಆದ ಈ ದೊಡ್ಡ ಗಾಯ. ಈಗ ತಾನೇ ಆದ ಗಾಯದ ಹಾಗೆ ಇನ್ನೂ ನೆತ್ತರು ಇಳಿಯುತ್ತಿದೆ” ಎಂದನು.

ಮಂದರದೇವನು ಬಗ್ಗಿ ಆ ವಿಕೃತಾಕಾರಿಯ ಕೈಯ ಗಾಯವನ್ನು ಪರೀಕ್ಷಿಸಿ, “ಶಿವದತ್ತಾ, ರಾತ್ರಿ ನಮ್ಮ ಮೇಲೆ ಕಲ್ಲು ಬಿಸುಟ ಪ್ರಾಣಿ ಇವನೇ. ನಾವು ಈ ದ್ವೀಪಕ್ಕೆ ಬರಲು ಕಾರಣವಾದ ಬೆಂಕಿಯ ಬೆಳಕು ಮಾಡಿದವನೂ ಇವನೇ ಇದ್ದೀತು. ಹಾಗಾದರೆ ಇವನು ಬುದ್ಧಿಯುಳ್ಳ ಮನುಷ್ಯನೇ ಇರಬೇಕು. ಇವನ ಕೈಯಲ್ಲಿ ಆದುದು ನನ್ನ ಬಾಣವು ಚುಚ್ಚಿಕೊಂಡ ಗಾಯವೇ. ಇದು ನರವಾನರವಂತೂ ಅಲ್ಲ, ನರನೇ” ಎಂದನು.

ಈಗ ಆ ವಿಕೃತಾಕಾರನ ಬಾಯಿಯಿಂದ, ನೋವನ್ನನುಭವಿಸುವಂತಹ ಸ್ವರದಲ್ಲಿ ಮಾತು ಹೊರಟಿತು. “ಹೌದೂ. ನಾನೂ ನಿಮ್ಮ ಹಾಗಿನ ಮನುಷ್ಯನೇ. ಬೆಂಕಿಮಾಡಿ ಮಾಂಸ ಬೇಯಿಸಿಕೊಂಡಿದ್ದವನೂ ನಾನೇ. ನಿಮ್ಮ ಕಡೆಗೆ ಕಲ್ಲು ಬಿಸುಟವನೂ ನಾನೇ. ಈ ಭಯಂಕರ ದ್ವೀಪದಲ್ಲಿ ಹನ್ನೆರಡು ವರ್ಷಗಳಿಂದ ಮನುಷ್ಯನನ್ನೇ ನೋಡದೆ ಒಬ್ಬಂಟಿಗನಾಗಿದ್ದೇನೆ. ಆದರಿಂದಲೇ ಹೀಗಾಗಿದ್ದೇನೆ. ನೀವು ಯಾರು? ಇಲ್ಲಿಗೆ ಬಂದ ಉದ್ದೇಶ ಏನು?” ಎಂದನು.

“ಹಾಗೇನು? ನಮ್ಮ ವಿಷಯವನ್ನು ಆಮೇಲೆ ಹೇಳುತ್ತೇವೆ. ಈಗ ನಿನ್ನದನ್ನು ಹೇಳು. ಏನು ನಿನ್ನ ಹೆಸರು? ಹನ್ನೆರಡು ವರ್ಷಗಳಿಂದ ಈ ದ್ವೀಪದಲ್ಲಿ ಒಬ್ಬನೇ ಇರುವ ಹಾಗೆ ಏನಾಯಿತು? ಹಾಗಾದರೆ ಯಾವ ದೇಶ ನಿನ್ನದು?” ಎಂದು ,ಶಿವದತ್ತನು ಕೇಳಿದನು.

ಶಿವದತ್ತನ ಪ್ರಶ್ನೆಗಳಿಗೆ ಅವನು ಒಮ್ಮೆಗೇ ಉತ್ತರ ಕೊಡಲಿಲ್ಲ. ಏನೋ ನೆನಪು ಮಾಡಿಕೊಳ್ಳುವವನಂತೆ ಸ್ವಲ್ಪ ಹೊತ್ತು ಸುಮ್ಮನಿದ್ದು, ಆಮೇಲೆ ಹೀಗೆಂದನು :

"ಅಯ್ಯಾ, ನನ್ನ ಹೆಸರು ವಜ್ರಮುಷ್ಟಿ. ಶಮನ ದ್ವೀಪದವನು ನಾನು. ನನಗೆ ಹದಿನೆಂಟನೇ ವಯಸ್ಸು ಪ್ರಾರಂಭವಾದಂದಿನಿಂದ, ಹೊಟ್ಟೆಯ ಪಾಡಿಗಾಗಿ ಸಮುದ್ರಕೇತು ಎಂಬ ಸಮುದ್ರ ಚೋರನಾಯಕನ ಕೈ ಕೆಳಗೆ ಕೆಲಸ ಮಾಡಿಕೊಂಡಿದ್ದೆ. ಸಮುದ್ರದಲ್ಲಿ ಪ್ರಯಾಣಿಸುವ ವರ್ತಕರ ನೌಕೆಗಳನ್ನೂ, ತೀರದಲ್ಲಿರುವ ಊರುಗಳನ್ನೂ ಕೊಳ್ಳೆ ಹೊಡೆಯುವುದೇ ನಮ್ಮ ಕೆಲಸ. ಹೀಗಿರುವಾಗ ಆ ಚೋರನಾಯಕನಿಗೂ ನನಗೂ ಸಣ್ಣದೊಂದು ಘಟನೆಯಿಂದ ದೊಡ್ಡ ವಾಗ್ವಾದವೆದ್ದಿತು. ಮಹಾ ಕ್ರೂರ ಗುಣದವನಾದ ಅವನು ನನ್ನನ್ನು ಈ ದ್ವೀಪದಲ್ಲಿ ದೂಡಿ ಹೋಗಿಬಿಟ್ಟ. ದಿಕ್ಕಿಲ್ಲದೆ ಒಣಗಿ ಸಾಯುವಂತೆ ಮಾಡಿದ ಆ ಪಾಪಿ, ನಾನು ಏನಾದೆನೆಂದು ಹಣಕಿಯೂ ನೋಡಲಿಲ್ಲ."

ಅವನು ಶಮನ ದ್ವೀಪದವನೆಂದು ತಿಳಿದು ಶಿವದತ್ತನಿಗೆ ಆಚ್ಚರಿಯಾಯಿತು. ಅದರೊಟ್ಟಿಗೆ ಶಮನದ್ವೀಪದ ಶಾಕ್ತೇಯನ ನೆನಪೂ ಬಂದಿತು. ಆ ಶಾಕ್ತೇಯನು ಬೆಳ್ಳಿ ಬಂಗಾರಗಳಿಂದಲೇ ಚಂಡೀದೇವಿಗೆ ಆಲಯ ಕಟ್ಟಿಸಲಿಕ್ಕಾಗಿ ಇತರ ರಾಜ್ಯಗಳ ಮೇಲೆ ದಾಳಿಗೆ ಹೊರಟ ಸಮಾಚಾರವೂ ಅವನ ನೆನಪಿಗೆ ಬಂದಿತು. ಎಲ್ಲಿದೆ ಆ ಶಮನ ದ್ವೀಪ ? ಈಗ ಅಲ್ಲಿಯ ರಾಜನು ಯಾರು ? ಎಂಬುದನ್ನೆಲ್ಲಾ ಈ ವಜ್ರಮುಷ್ಟಿಯಿಂದ ತಿಳಿಯ ಬಹುದೆಂದೂ ತೋರಿತು, ಇದನ್ನೆಲ್ಲ ತಿಳಿಯಲು ಇದು ಸಮಯವಲ್ಲ. ಈಗ ತಿಳಿಯ ಬೇಕಾದುದು ಅಪರಿಚಿತವಾದ ತಾವು ಸೇರಿದ ಈ ದ್ವೀಪದ ಸ್ಥಿತಿಗತಿ ಹೇಗಿದೆ ಎಂಬುದೇ ಮುಖ್ಯ. ಅದನ್ನು ಇವನಿಂದ ತಿಳಿಯಬಹುದು. ಇವನು ನಮ್ಮ ಒಳಿತಿಗೇ ಸಿಕ್ಕಿದನೆಂದುಕೊಳ್ಳೋಣ.




"ವಜ್ರಮುಷ್ಟಿ, ನಿನ್ನ ಹೆಸರು ಚೆನ್ನಾಗಿದೆ. ನೀನು ಈ ದ್ವೀಪದಲ್ಲಿ ಹನ್ನೆರಡು ವರ್ಷಗಳಿಂದ ಇರುವುದಾಗಿ ಹೇಳುವಿ. ಇಲ್ಲಿ ವಾಸ ಮಾಡುವ ಜನರನ್ನು ಕುರಿತು, ಅವರ ಆಚಾರ ವಿಶೇಷಗಳನ್ನು ಕುರಿತು, ನಿನಗೆ ಚೆನ್ನಾಗಿ ಗೊತ್ತಿರ ಬೇಕೆಂದು ತೋರುತ್ತದೆ. ಏನನ್ನುವಿ ? ಅವರೆಲ್ಲ ಎಂಥವರು ?" ಎಂದು ಕೇಳಿದನು ಶಿವದತ್ತ.

ವಜ್ರಮುಷ್ಟಿ ತಲೆತಗ್ಗಿಸಿಕೊಂಡು, "ಅಯ್ಯಾ, ಇಷ್ಟು ವರ್ಷಗಳಿಂದ ನಾನು ಇಲ್ಲಿದ್ದರೂ ನನಗೆ ಈ ದ್ವೀಪವನ್ನು ಕುರಿತು ಹೆಚ್ಚೇನೂ ಗೊತ್ತಿಲ್ಲ. ನನ್ನ ಹೊಟ್ಟೆಯ ಪಾಡು ನೋಡಿಕೊಳ್ಳುವುದಕ್ಕೂ ಕ್ರೂರ ಮೃಗಗಳಿಂದ ತಪ್ಪಿಸಿಕೊಳ್ಳುವುದಕ್ಕೂ ನನ್ನ ಕಾಲ ಸರಿಹೋಗುತಿತ್ತು. ಒಂದೆರಡು ಸಾರಿ ಮಾತ್ರ, ಸಮುದ್ರ ಕೇತನ ಚೋರನಾವೆಗಳು ಈ ತೀರದ ಹತ್ತಿರವಾಗಿ ಹೋಗುವುದನು ನೋಡಿದ್ದೇನೆ. ನನ್ನ ಹೆಣವನ್ನು ನೋಡಲಿಕ್ಕೂ ಅವನಿಗೆ ಇಷ್ಟವಿರಲಿಲ್ಲ



ನಿಮ್ಮನ್ನೆಲ್ಲ ಕಂಡು ನೀವೂ ಅವನ ಕಡೆಯವರಾಗಿರಬೇಕೆಂತಲೇ ಕಲ್ಲು ಬಿಸುಟೆ. ಇದಕ್ಕಿಂತ ಹೆಚ್ಚಿಗೆ ನನಗೇನೂ ತಿಳಿಯದು " ಎಂದನು.

" ಈವರೆಗೂ ಈ ದ್ವೀಪದಲ್ಲಿ ನಿನಗೆ ಯಾವ ಮನುಷ್ಯನೂ ಕಾಣಲಿಲ್ಲವೇನು ? " ಎಂದು ಶಿವದತ್ತನು ಆಶ್ಚರ್ಯದಿಂದ ಕೇಳಿದನು.

ವಜ್ರಮುಷ್ಟಿ ಏನೋ ನೆನಪು ಮಾಡಿಕೊಂಡವನಂತೆ ತಲೆಯಾಡಿಸಿ, " ಈ ಹನ್ನೆರಡು ವರ್ಷಗಳ ಅವಧಿಯಲ್ಲಿ ಸುಮಾರು ನಾಲ್ಕೈದುಸಾರಿ ಮನುಷ್ಯರನ್ನು ನೋಡಿದ್ದುಂಟು. ಅವರು ಆಜಾನುಬಾಹುಗಳಾದ ಕಟ್ಟಾಳುಗಳಾಗಿದ್ದರು. ತಲೆಯ ಮೇಲೆ ದೊಡ್ಡ ದೊಡ್ಡ ಕೊಂಬುಗಳನ್ನು ಧರಿಸಿಕೊಂಡಿದ್ದರು. ಅವರ ನಿವಾಸ ಮಾತ್ರ ಈ ದ್ವೀಪದಲ್ಲಿ ಎಲ್ಲಿದೆಯೋ ನಾನರಿಯೆ. ಅವರು ಬೇಟೆಯಾಡುತ್ತಾ ಬಂದು. ತಮ್ಮ ಕೆಲಸವಾದ ಮೇಲೆ ಎಲ್ಲಿಗೋ ಹೋಗುತ್ತಾರೆ. ಅವರು ಯಾರು ಏನೆಂಬುದನ್ನು ತಿಳಿಯುವ ಕುತೂಹಲವೇ ನನಗಿಲ್ಲ. ಸತ್ತ ನನ್ನ ಮನಸ್ಸಿಗೆ ಈಗಷ್ಟೇ ಜೀವ ಬರುವ ಹಾಗೆ ಕಾಣುತ್ತದೆ " ಎಂದನು.

ಅವನು ಹೇಳಿದುದನ್ನು ಕೇಳಿ ಶಿವದತ್ತನು ಮಂದರದೇವನನ್ನು ನೋಡಿ ತಲೆದೂಗಲು, ಮಂದರದೇವನು ಮುಗುಳುನಗುತ್ತ, " ಶಿವದತ್ತಾ, ನಮಗೊಬ್ಬ ಒಳ್ಳೆಯವನೇ ಸಿಕ್ಕಿದಂತೆ ಕಾಣುತ್ತದೆ. ಪ್ರಸ್ತುತಕ್ಕೆ ನಾವು ಈ ದ್ವೀಪಕ್ಕೆ ಬಂದು ಸೇರಿಕೊಂಡಾಯಿತು. ಆದ್ದರಿಂದ ಇಲ್ಲಿ ಸುತ್ತು ಮುತ್ತಲೂ ಚೆನ್ನಾಗಿ ಶೋಧನೆ ಮಾಡಿ, ನಾವು ಎಂತಹ ಪ್ರದೇಶಕ್ಕೆ ಬಂದಿರುವೆವೆಂಬುದನ್ನು ತಿಳಿದುಕೊಳ್ಳಬೇಕು. ಈ ಹಗಲು ಕಳೆಯುವುದಕ್ಕೆ ಮೊದಲೇ ಆ ಕೆಲಸ ಮುಗಿಸಬೇಕು. ಆ ಮೇಲೆ ಮಳೆಗಾಳಿಗಳಿಂದ ಪಾರಾಗುವಂತೆ ಏನಾದರೊಂದು ಕುಟೀರವನ್ನು ಕಟ್ಟಿಕೊಳ್ಳಬೇಕು " ಎಂದನು.

ಶಿವದತ್ತನು ಅದು ನಿಜವೆಂಬಂತೆ ತಲೆಯಾಡಿಸಿ ಸೈನಿಕರ ಕಡೆಗೆ ತಿರುಗಿ, ವಜ್ರಮುಷ್ಟಿಯ ಕಟ್ಟುಗಳನ್ನು ಬಿಚ್ಚುವಂತೆ ಹೇಳಿದನು. ಬಂಧನದಿಂದ ಬಿಡುಗಡೆಯಾಗುತ್ತಲೇ ವಜ್ರಮುಷ್ಟಿ ಶಿವದತ್ತ, ಮಂದರದೇವಂದಿರಿಗೆ ಕೈಜೋಡಿಸಿ ನಮಸ್ಕಾರ ಮಾಡಿ, " ಅಯ್ಯಾ, ನನ್ನನ್ನು ಕೂಡಾ ನಿಮ್ಮ ಅನುಚರನನ್ನಾಗಿ ಮಾಡಿಕೊಳ್ಳುವಿರಾ ? ಕಳ್ಳರ ಗುಂಪಿನವನೆಂದು ನನ್ನನ್ನು ಹೀನಾಯಿಸಬೇಡಿರಿ. ಬೇಕಾದರೆ ಪ್ರಮಾಣ ಮಾಡಿ ಹೇಳುತ್ತೇನೆ. ವಿಶ್ವಾಸಪಾತ್ರನಾಗಿ ನಿಮಗೆ ಸೇವೆ ಮಾಡುತ್ತೇನೆ " ಎಂದನು.

ಶಿವದತ್ತನು ತನ್ನ ಅನುಚರರನ್ನು ಪ್ರಶ್ನಾರ್ಥಕವಾಗಿ ನೋಡಿದನು. ಅವರೂ ಒಪ್ಪಿಕೊಳ್ಳುವವರಂತೆ ಕೈಗಳನ್ನು ಎತ್ತಿದರು. ಮೂವರು ಸೈನಿಕರು ವಜ್ರಮುಷ್ಟಿಯ ಬೆನ್ನು ತಟ್ಟಿ ತಮ್ಮ ಸ್ನೇಹವನ್ನು ಸೂಚಿಸಿದರು. ಅವನ ಮುಖದಲ್ಲಿ ಬೆಳ್ಳಗಿನ ಹಲ್ಲು ಹೊಳೆದುದನ್ನು ನೋಡಿ ಸಂತಸದಿಂದ ನಕ್ಕನೆಂದು ತಿಳಿಯಿತು.

" ಈ ಹೊಸ ಸಂಧಿಕೆಯಿಂದ ನಮ್ಮ ಹಸಿವೆಯನ್ನೇ ಮರೆತೆವು. ಇನ್ನೀಗ ಆ ಕೆಲಸ ಮುಗಿಸಿಬಿಡೋಣ.




ಇವನೊಬ್ಬ ನಮಗೆ ದೊರಕಿದ ಹೊಸ ಅತಿಥಿ. ಹೊಟ್ಟೆ ಗಟ್ಟಿಯಾದ ಮೇಲೆ ಸುತ್ತು ಮುತ್ತಲೂ ತಿರುಗಾಡಿ ದ್ವೀಪದ ಪರಿಸ್ಥಿತಿಯನ್ನು ನೋಡ ಬಹುದು " ಎಂದನು ಮಂದರದೇವ.

ಶಿವದತ್ತನು ಸೈನಿಕರಿಗೆ ಸನ್ನೆ ಮಾಡಲು, ಸೈನಿಕರು ಒಣಗಿದ ದರಲೆ ಪುರಲೆ ಕೊಂಬೆಗಳನ್ನು ರಾಶಿ ಮಾಡಿ, ಆರಿದ ಬೆಂಕಿಯನ್ನು ಧಗಧಗಿಸಿದರು. ಕೊಲ್ಲಲ್ಪಟ್ಟ ಕಾಡು ಹಂದಿಯನ್ನೆತ್ತಿ ಆ ಬೆಂಕಿಗೆ ಹಾಕಿ ಬೇಯಿಸ ತೊಡಗಿದರು. ಅದರಿಂದ ಬರುವ ಬಿಸಿ ಬಿಸಿ ವಾಸನೆ ಅವರೆಲ್ಲರ ಮೂಗಿಗೂ ಹಿತಕರವಾಗಿತ್ತು.

ಅದನ್ನು ನೋಡಿಕೊಂಡಿದ್ದ ವಜ್ರಮುಷ್ಟಿ ಸ್ವಲ್ಪ ಹೊತ್ತು ಸುಮ್ಮನಿದ್ದು. " ಅಯ್ಯಾ, ಇದೊಂದು ಹಂದಿ ಮಾತ್ರ ನಮ್ಮೆಲ್ಲರ ಹೊಟ್ಟೆಗೆ ಸರಿಹೋಗುವಂತೆ ಕಾಣುವುದಿಲ್ಲ. ನಿಮ್ಮ ಅನುಮತಿಯಾದರೆ ನಾಲ್ಕೈದು ನಿಮಿಷಗಳಲ್ಲಿ ನಾನು ಇನ್ನೇನನ್ನಾದರೂ ಹಿಡಿದು ಕೊಂಡು ಬಂದುಬಿಡುತ್ತೇನೆ. ಇದು ಒಬ್ಬೊಬ್ಬರ ಅರ್ಧ ಹಸಿವೆಗೂ ಸಾಕಾಗುವಂತಿಲ್ಲ " ಎಂದನು.

ಮಂದರದೇವ, ಶಿವದತ್ತರು, ಅವನೊಂದಿಗೆ ಇನ್ನಿಬ್ಬರು ಸೈನಿಕರನ್ನು ಕೂಡಾ ಬಿಲ್ಲು ಬಾಣಗಳನ್ನು ತೆಗೆದುಕೊಂಡು ಹೋಗುವಂತೆ ಹೇಳಿದರು. ಹಾಗೆ ಸ್ವಲ್ಪದೂರ ಹೋದ ಮೇಲೆ, ಒಂದೆಡೆಯಲ್ಲಿ ನಾಲ್ಕೈದು ಜಿಂಕೆಗಳು ಮೇಯುತ್ತಿರುವುದನ್ನು ಕಂಡರು. ಸೈನಿಕರು ಬಿಲ್ಲಿಗೆ ಬಾಣಹೂಡಲು ನೋಡು ವಾಗ, ವಜ್ರಮುಷ್ಟಿ ತಡೆದು, " ಈ ಚಿಕ್ಕ ಪ್ರಾಣಿ ಗಳನ್ನು ಹಿಡಿಯಲು ಬಾಣವೇಕೆ ವ್ಯರ್ಥಗೊಳಿಸುವಿರಿ? ನೀವು ಇಲ್ಲೇ ಸುಮ್ಮನೆ ವಿಶ್ರಾಂತಿಯಾಗಿ ಇದ್ದು ಬಿಡಿರಿ. ನಾನು ಹೋಗಿ ಕೆಲಸ ಮುಗಿಸಿಕೊಂಡು ಬರುತ್ತೇನೆ " ಎಂದು ಹೇಳಿ ಮರಗಳ ಹಿಂದಿನಿಂದಾಗಿ ಬೆಕ್ಕಿನ ಹೆಜ್ಜೆ ಗಳಿಂದ ಆ ಕಡೆಗೆ ಹೋದನು.

ಸೈನಿಕರು ಕೂಡಾ ನಿಶ್ಶಬ್ದವಾಗಿ ಅವನ ಹಿಂದೆಯೇ ನಡೆದರು. ವಜ್ರಮುಷ್ಟಿ ಅಡಿಮೇಲಡಿಯಿಡುತ್ತಾ, ಸ್ವಲ್ಪದೂರ ನಡೆದು ಜಿಂಕೆಗಳಿರುವ ಸ್ಥಳದ ಪಕ್ಕದಲ್ಲಿ ರುವ ಒಂದು ಮರದ ಮೇಲೆ ಬೆಕ್ಕಿನ ಹಾಗೆ ಏರಿ ಕೊಂಡನು. ಅವನು ಏನು ಮಾಡುವನೆಂಬುದನ್ನು ತಿಳಿಯದ ಸೈನಿಕರು ಅದನ್ನೆಲ್ಲ ವಿಚಿತ್ರವಾಗಿ ನೋಡು ತ್ತಿದ್ದರು. ವಜ್ರಮುಷ್ಟಿ ಜಿಂಕೆಗಳ ಮೇಲ್ಭಾಗದಲ್ಲಿರುವ ಮರದ ಕೊಂಬೆಯಲ್ಲಿ ಹಾವಿನ ಹಾಗೆ ಬಿದ್ದುಕೊಂಡು ಮುಂದೆ ಮುಂದೆ ಸರಿದು, ಫಕ್ಕನೆ ಅಲ್ಲಿಂದ ಜಿಂಕೆಗಳ ಮೇಲೆ ಹಾಕಿಬಿಟ್ಟನು. ಅದನ್ನು ನೋಡಿ ಸೈನಿಕರು ಮೆಟ್ಟಿ ಬಿದ್ದರು. ಅವನೇ ಹಾರಿದನೋ ಯಾವುದೋ ಹೆಬ್ಬಾವು ಹಾರಿತೋ ಎಂದು ಆ ಕ್ಷಣದಲ್ಲಿ ಅವರಿಗೆ ತಿಳಿಯಲಿಲ್ಲ.

ಕಣ್ಣು ಮುಚ್ಚಿ ತೆರೆಯುವುದರೊಳಗೆ ಜಿಂಕೆಗಳು ಛಂಗನೆ ಹಾರಿ ಕೊಂಡುವು. ಅವುಗಳಲ್ಲೊಂದು ವಜ್ರ ಮುಷ್ಟಿಯ ಬಲವಾದ ಕೈಗಳಲ್ಲಿ ತಗಲಿಕೊಂಡು ಓಡಿಹೋಗಲು ವ್ಯರ್ಥಪ್ರಯತ್ನ ಮಾಡುತ್ತಿತ್ತು. ವಜ್ರಮುಷ್ಟಿ ತನ್ನ ಕೈಗಳಲ್ಲಿ ಸಿಕ್ಕಿಕೊಂಡ ಜಿಂಕೆ

ಯನ್ನು ನಿರಾಯಾಸದಿಂದ ಹೆಗಲ ಮೇಲೆ ಹಾಕಿಕೊಂಡು, "ಈ ಹನ್ನೆರಡು ವರ್ಷಗಳವರೆಗೆ ನನ್ನ ಹೊಟ್ಟೆಯ ಪಾಡು ಹೀಗೆಯೇ ನಡೆಯುತ್ತಿತ್ತು. ಬಾಣ ಈಟಿಗಳಾವುದೂ ಇಲ್ಲೆಲ್ಲಿಯೂ ಸಿಗಲಿಲ್ಲ. ಒಂದೆರಡುಸಾರಿ ಹುಲಿ, ಕರಡಿಗಳೊಂದಿಗೆ ಕೂಡಾ ಬರಿಗೈಯಿಂದಲೇ ಹೋರಾಡಿ ಬದುಕಿ ಉಳಿದಿದ್ದೇನೆ." ಎಂದನು. ಕೌತುಕದಿಂದ ಅವನ ಸುತ್ತಲೂ ಸೇರಿದ ಸೈನಿಕರೊಂದಿಗೆ.

ಸೈನಿಕರು ವಜ್ರಮುಷ್ಟಿಯ ಶರೀರದ, ಶಕ್ತಿ, ಕೋತಿಗಳ ಅಭ್ಯಾಸ, ಹಾರುವ ಜಾಣ್ಮೆ, ಧೈರ್ಯಗಳನ್ನು ನೋಡಿ ಆಶ್ಚರ್ಯಪಡುತ್ತಿದ್ದರು. ಸುಮಾರು ಐದಡಿ ಎತ್ತರವೂ, ಗಿಡ್ಡಗಿನ ಕಾಲುಗಳೂ, ಗಿಡ್ಡ ಕೈಗಳೂ ಇರುವ ವಜ್ರಮುಷ್ಟಿ ನರವಾನರದಂತಹ ಬಲಿಷ್ಠನೆಂದು ಅವರಿಗೆ ಗೊತ್ತಾಯಿತು. ಜೀವನ್ಮರಣದ ಹೋರಾಟದಲ್ಲೇ ಕಾಲ ಕಳೆದುದರಿಂದ ಈ ಬಗೆಯ ಅಭ್ಯಾಸಗಳು ಅವನಿಗೆ ಕರಗತವಾಗಿವೆ, ಎಂದು ತಿಳಿದರು.

ಎಲ್ಲರೂ ಶಿವದತ್ತನಿರುವಲ್ಲಿಗೆ ಬಂದರು. ವಜ್ರಮುಷ್ಟಿ ಜಿಂಕೆಯನ್ನು ಹಿಡಿದ ರೀತಿಯನ್ನು ಸೈನಿಕರಿಂದ ಕೇಳಿ ಶಿವದತ್ತನು ಆಶ್ಚರ್ಯಪಟ್ಟನು.

ಮಂದರದೇವನು ಎದ್ದು ಮುಂದೆ ಬಂದು, ವಜ್ರಮುಷ್ಟಿಯ ಭುಜವನ್ನು ತಟ್ಟುತ್ತ, "ವಜ್ರಮುಷ್ಟೀ, ನೀನು ನಮ್ಮ ಅನುಚರನಾಗಿ ನಮಗೆ ಸಿಕ್ಕಿದ್ದು ನಮ್ಮ ಅದೃಷ್ಟವೆಂದು ಕಾಣುತ್ತದೆ. ನಿನಗೆ ಸಮುದ್ರಕೇತು ಮಾಡಿದ ದ್ರೋಹದಂತಹುದೇ ನಮಗೂ ನರವಾಹನನೆಂಬವನು ದೊಡ್ಡ ದ್ರೋಹ ಮಾಡಿದ್ದಾನೆ. ನಾವಿಬ್ಬರೂ ಈ ಹಗೆಯನ್ನು ತೀರಿಸಿಕೊಳ್ಳಲಿಕ್ಕೇ ಬದುಕಿರಬೇಕು" ಎಂದನು.

"ಮಂದರದೇವ ಪ್ರಭುಗಳು ಹೇಳಿದಂತೆ ನೀನು ನಮ್ಮ ಅನುಚರನಾಗಿರಲು ತಕ್ಕವನೇ ಸರಿ. ಈ ದ್ವೀಪದಲ್ಲಿ ನಾವು ಇದಿರಿಸಬೇಕಾದ ಅಪಾಯವೇನಾದರೂ ಇದ್ದರೆ, ಇಲ್ಲೇ ಇದ್ದು ಪಳಗಿದವನಾದ ನಿನ್ನಿಂದ ನಮಗೆ ಸಹಾಯವಾದೀತು. ಎಂದೋ ಒಂದುದಿನ ನಿನ್ನನ್ನು ಇಲ್ಲಿ ದೂಡಿ ಹೋದ ನಿನ್ನ ಹಗೆಗಾರನೂ ನಿನ್ನ ಕೈಗೆ ಸಿಕ್ಕದಿರಲಾರನೆಂದು ನನ್ನ ನಂಬುಗೆ" ಎಂದನು ಶಿವದತ್ತ.

"ಅಯ್ಯಾ, ಅಂತಹ ಸುದಿನವನ್ನೇ ನಾನೂ ಇದಿರು ನೋಡುತ್ತೇನೆ." ಎಂದ. ವಜ್ರಮುಷ್ಟಿ ಹೇಳುತ್ತಿರಲು, ಅವರ ಭೋಜನ ಸನ್ನಾಹಕ್ಕೆ ಆಗಲೇ ವಿಘ್ನ ಬಂತೇನೋ ಎಂಬ ಹಾಗೆ, ಸಮುದ್ರ ತೀರದ ಕಡೆಯಿಂದ ಏನೇನೋ ವಿಕಾರವಾದ ಕೂಗು ಬೊಬ್ಬೆಗಳು ಕೇಳತೊಡಗಿದುವು. ಎಲ್ಲರೂ ಮತ್ತೆ ಆಶ್ಚರ್ಯಚಕಿತರಾಗಿ ಆ ಕಡೆಗೆ ಮುಖ ತಿರುಗಿಸಿದರು.

—(ಇನ್ನೂ ಇದೆ)






# ಉತ್ತಮಲೋಭಿ

ಉತ್ತರವೇ ಇಲ್ಲದ ಕಥಾಸಮಸ್ಯೆ ಬರುವವರೆಗೂ ಬಿಡಲಾರೆನೆಂಬ ಪಟ್ಟುತೊಟ್ಟ ರಾಜಾ ತ್ರಿವಿಕ್ರಮನು ಮತ್ತೆ ಮರದ ಬಳಿಗೆ ಹೋಗಿ, ಕೊಂಬೆಯಲ್ಲಿ ನೇತಾಡುವ ಶವವನ್ನು ಕೆಳಗಿಳಿಸಿ ತನ್ನ ಹೆಗಲ ಮೇಲೆ ಹಾಕಿಕೊಂಡು, ಮೌನವಾಗಿ ಶ್ಮಶಾನದ ಕಡೆಗೆ ನಡೆಯತೊಡಗಿದನು. ಆಗ ಶವದೊಳಗಿನ ಬೇತಾಳವು ಮಾತಾಡಲು ತೊಡಗಿ, "ಎಲೈ ಮಹಾರಾಜನೇ, ಎಷ್ಟಾದರೂ ನಿನ್ನ ಪಟ್ಟುತನಕ್ಕೂ ಸಹನೆಗೂ ವಿವೇಕದ ಸಹಾಯ ಕೂಡಾ ಬೇಕಾಗುತ್ತದೆನ್ನಲು ಮರೆಯಬೇಡ. ಅದಿಲ್ಲದಿದ್ದರೆ ನಿನ್ನ ಸಾಧನೆ ನೆಲೆಸಿ ನಿಲ್ಲುವಂತಿಲ್ಲ. ನಿನ್ನ ಶ್ರಮದ ಫಲ ಇನ್ನೊಬ್ಬರಿಗೆ ಸೇರಿಬಿಡುತ್ತದೆ. ಈ ರಾತ್ರಿಯ ಹೊತ್ತಿನಲ್ಲಿ ನಿನ್ನನ್ನು ಇಂತಹ ಕಷ್ಟಕ್ಕೆ ಪ್ರೇರೇಪಿಸಿದವನು ನಿನಗಿಂತ ವಿವೇಕವಂತನಾದರೆ, ವಜ್ರಪುರಿಯ ರಾಜನ ಹಾಗೆ ನಷ್ಟಕ್ಕೇ ಗುರಿಯಾಗುತ್ತೀ. ನಿನಗೆ ನನ್ನ ಭಾರ ಹೊತ್ತು ನಡೆಯುವ ಶ್ರಮ ತಿಳಿಯದಂತೆ ಆ ಕಥೆಯನ್ನು ಕೇಳುತ್ತಾ ನಡೆ" ಎಂದು ಹೇಳಿ ಹೀಗೆ ಕಥೆಯನ್ನು ಪ್ರಾರಂಭಿಸಿತು : ವಜ್ರಪುರಿಯನ್ನು ಆಳುವ ರಾಜನಾದ ಚಂದ್ರಸೇನನು

## ಬೇತಾಳಕಥೆಗಳು?..



ಒಂದುಸಾರಿ ವೇಷ ಪಲ್ಲಟಿಸಿಕೊಂಡು ದೇಶದೊಳಗೆ ಸಂಚರಿಸುತ್ತ, ಅರ್ಧರಾತ್ರಿಯ ಹೊತ್ತಿನಲ್ಲಿ ಒಂದು ಚಿಕ್ಕ ಗ್ರಾಮವನ್ನು ತಲಪಿದನು. ಆಗ ಊರೆಲ್ಲಾ ನಿದ್ದೆಯಲ್ಲಿ ಮುಳುಗಿದ್ದಿತು. ರಾಜನು ಒಂದು ಮನೆಯ ಮುಂದೆ ನಿಂತು ಬಾಗಿಲು ತಟ್ಟಲು ಕೈಯೆತ್ತಿದನು.

"ಯಾರಪ್ಪಾ ಅದು ? ನೋಡಿದರೆ ಪರದೇಶಿ ಯಾಗಿ ಕಾಣುವಿ. ಅರ್ಧರಾತ್ರಿಯಲ್ಲಿ ಈ ಮನೆಯ ಬಾಗಿಲನ್ನು ಏಕೆ ತಟ್ಟುವಿ ? " ಎಂಬ ಪ್ರಶ್ನೆ ರಾಜನ ಕಿವಿಗೆ ಬಿತ್ತು.

ರಾಜನು ಹಿಂದಿರುಗಿ ನೋಡಿದನು. ಸುಮಾರು ಇಪ್ಪತ್ತೈದು ವಯಸ್ಸಿನ ಯುವಕನೊಬ್ಬನು ನಿಂತು ರಾಜನನ್ನು ಪರೀಕ್ಷಿಸಿ ನೋಡುತ್ತಿದ್ದನು.

"ಯಾರು ನೀನು ? ನಿನಗೂ ಈ ಮನೆಗೂ ಏನಾದರೂ ಸಂಬಂಧವಿದೆಯೆ ? " ಎಂದು ರಾಜನು ತಿರುಗಿ ಕೇಳಿದನು.

"ಎಲ್ಲಾ ಮನೆಗಳಿಗೂ ನನ್ನ ಸಂಬಂಧವಿದೆ. ನಾನು ಈ ಊರಿಗೆ ರಾತ್ರಿಯಲ್ಲಿ ಕಾವಲು ಕಾಯು ವವನು. ನೀನು ಪರದೇಶಿಯೋ ಕಳ್ಳನೋ ಎಂಬ ಅನುಮಾನ ಉಂಟಾಯಿತು. ಒಂದುವೇಳೆ ನೀನು ಪರದೇಶಿಯಾಗಿದ್ದರೆ ನಿನಗೊಂದು ಸಣ್ಣ ಎಚ್ಚರಿಕೆ ಹೇಳೋಣವೆಂದಿದ್ದೇನೆ." ಎಂದನು ಕಾವಲಿನವ.

"ಅದೇನೆಂದು ಹೇಳಿಬಿಡು. ನಾನು ಪರದೇಶಿಯೇ ನಿಜ " ಎಂದನು ರಾಜ.

"ಈ ಮನೆಯುವನು ಪರಮ ಲೋಭಿ. ಅವನು ಈ ರಾತ್ರಿಯಲ್ಲಿ ನಿನಗೆ ಉಚಿತವಾಗಿ ಆಶ್ರಯ ಕೊಡಲಾರ. ಹಾಗೆ ಕೊಡುವವರು ಈ ಊರಿನಲ್ಲಿ ಬೇರೆ ಅನೇಕರಿದ್ದಾರೆ. ಇದೇ ನಾನು ನಿನಗೆ ಹೇಳ ಬೇಕಾಗಿರುವ ಮಾತು." ಎಂದನು ಕಾವಲಿನವ.

ರಾಜನಿಗೆ ಈ ಲೋಭಿಯ ಸಂಗತಿಯನ್ನು ತಿಳಿದು ಕೊಳ್ಳಬೇಕೆಂದು ತೋರಿತು. ಆದುದರಿಂದ ಕಾವಲಿ ನವನ ಮಾತನ್ನು ಅಲಕ್ಷ್ಯಮಾಡಿ ಆ ಮನೆಯ ಬಾಗಿಲನ್ನು ತಟ್ಟಿದನು. ಆ ಕೂಡಲೇ ಒಳಗಿನಿಂದ "ಇದೋ ಬಂದೆ" ಎಂಬ ಗಂಡಸಿನ ಧ್ವನಿ ಕೇಳಿತು.

ಅಷ್ಟು ರಾತ್ರಿಯ ಹೊತ್ತಿನಲ್ಲಿ ತಟ್ಟಿದ ಕೂಡಲೇ ಬಾಗಿಲು ತೆರೆದವನು ಲೋಭಿ ಹೇಗಾಗುವನೆಂದು ರಾಜನಿಗೆ ಅನುಮಾನವಾಯಿತು.

ಬಾಗಿಲು ತೆರೆದ ಕೂಡಲೇ ರಾಜನು ಒಳಗೆ ಹೋಗಿ, "ತಾವು ತುಂಬಾ ದಯಾಗುಣದವರೆಂದು ಕೇಳಿದೆ. ನಾನೊಬ್ಬ ಪರದೇಶೀ ಪ್ರಯಾಣಿಕ. ಈ ರಾತ್ರಿಯಲ್ಲಿ ತಮ್ಮ ಮನೆಯಲ್ಲಿ ಆಶ್ರಯ ಕೊಡಬೇಕು " ಎಂದನು.

"ನೀನು ನನ್ನನ್ನು ಕುರಿತು ಕೇಳಿದ್ದು ತಪ್ಪಾದ ಸಂಗತಿ. ನನ್ನಲ್ಲಿ ದಯಾಗುಣವೇನೂ ಇಲ್ಲ. ನಾನು ಪರದೇಶಿಗಳಿಗೆ ಆಶ್ರಯ ಕೊಡುವವನೂ ಅಲ್ಲ" ಎಂದು ನಿರ್ದಾಕ್ಷಿಣ್ಯದಿಂದ ಕಟ್ಟಿಗೆ ಮುರಿದ ಹಾಗೆ ಹೇಳಿದನು ಲೋಭಿ.



"ಅತಿಥಿಗಳಿಗೆ ಆಶ್ರಯ ಕೊಡುವುದಕ್ಕಾಗಿ ನೀವು ರಾತ್ರಿ ಹಗಲೂ ಇದಿರು ನೋಡುತ್ತಿರುವಿರೆಂದು ಎಲ್ಲರೂ ಹೇಳಿದರು. ನಾನು ಬಾಗಿಲು ತಟ್ಟಿದ ಮರುಕ್ಷಣದಲ್ಲೇ ನೀವು ಬಾಗಿಲು ತೆರೆದುದೇ ಅದಕ್ಕೆ ಸಾಕ್ಷಿ!" ಎಂದನು ರಾಜ.

"ಓ! ಅದುವೋ? ನನ್ನ ಹಣವನ್ನು ಯಾವ ಕಳ್ಳ ಕೊರಮನೋ ಬಂದು ದೋಚಿಕೊಂಡು ಹೋಗುತ್ತಾನೆಂಬ ಭಯದಲ್ಲಿ ರಾತ್ರಿ ನನಗೆ ಸರಿಯಾಗಿ ನಿದ್ದೆ ಹಿಡಿಯುವುದಿಲ್ಲ. ಅದ್ದರಿಂದ ನೀನು ಬಾಗಿಲು ತಟ್ಟಿದ ಕೂಡಲೇ ನನ್ನ ಕಿವಿಗೆ ಕೇಳಿತು. ನಿಧಾನ ಮಾಡಿದರೆ ತಟ್ಟುವವರು ಪದೇ ಪದೇ ತಟ್ಟುತ್ತಾರೆ. ಆಗ ಬಾಗಿಲು ತೇದು ಬಲಹೀನ ವಾಗುತ್ತದೆ. ಹಾಗಾಗದಂತೆ ಬೇಗನೇ ಬಂದು ಬಾಗಿಲು ತೆರೆದೆ. ಆಯಿತಲ್ಲ, ಇನ್ನು ಹೋಗು" ಎಂದನು. ಲೋಭಿ.

"ಇಂತಹ ರಾತ್ರಿಯ ಹೊತ್ತಿನಲ್ಲಿ ಎಲ್ಲಿಗೆ ಹೋಗಲಿ? ನೀವು ಸುಮ್ಮನೆ ಆಶ್ರಯ ಕೊಡಬೇಡಿ. ಹಣ ತೆಗೆದುಕೊಂಡೇ ಆಶ್ರಯ ಕೊಡಿ." ಎಂದು ರಾಜನು ಲೋಭಿಗೆ ಒಂದು ಚಿನ್ನದ ನಾಣ್ಯವನ್ನು ತೆಗೆದು ತೋರಿಸಿದನು.

ಚಿನ್ನದ ನಾಣ್ಯವನ್ನು ಆತುರದಿಂದ ತೆಗೆದು ಕೊಂಡ ಲೋಭಿ, ರಾಜನಿಗೆ ಮಲಗಲು ಒಳ್ಳೆಯ ಹಾಸಿಗೆಯನ್ನು ಏರ್ಪಡಿಸಿಕೊಟ್ಟನು. ಮರುದಿನ ಆ ಲೋಭಿ ಬದುಕುವ ರೀತಿಯನ್ನು ನೋಡಿ ರಾಜನಿಗೆ ಬಹಳ ಚಿಂತೆಯಾಯಿತು.

ಲೋಭಿಯ ಮನೆಯ ಹಿಂದಿನ ತೋಟದಲ್ಲಿ ಹಣ್ಣಿನ ಮರಗಳಿದ್ದುವು. ಹಟ್ಟಿಯಲ್ಲಿ ಎರಡು ದನ ಗಳೂ, ಎರಡು ಎಮ್ಮೆಗಳೂ ಇದ್ದುವು. ಮನೆ ಯೊಳಗಿನ ಕಸಬಳಿಯುವುದರಿಂದ ಹಿಡಿದು ಅಡಿಗೆ ಮಾಡುವುದರ ವರೆಗೂ ಅವನೇ ಎಲ್ಲವನ್ನೂ ಮಾಡು ತ್ತಿದ್ದನು. ತನ್ನ ಹಣವನ್ನು ಬಡ್ಡಿಯ ಮೇಲೆ ಸಾಲ ಕೊಡುತ್ತಿದ್ದನು. ಹಾಲು ಹಣ್ಣುಗಳನ್ನು ಮಾರು ತ್ತಿದ್ದನು. ಒಂದು ಕ್ಷಣವೂ ವಿಶ್ರಾಂತಿ ಇಲ್ಲದೆ, ತಿನವಿಡೀ ಕಷ್ಟಪಟ್ಟು, ರಾತ್ರಿ ತನ್ನ ಹಣವು ಏನಾಗಿ ಹೋಗುತ್ತದೋ ಎಂದು ದಿಗಿಲುಪಡುತ್ತಾ, ಸರಿಯಾಗಿ ನಿದ್ದೆಯನ್ನೂ ಮಾಡುವುದಿಲ್ಲ.

ಒಂದು ಹೊತ್ತಾದರೂ ಅವನು ಹೊಟ್ಟೆ ತುಂಬಾ ತೃಪ್ತಿಯಾಗಿ ಉಣ್ಣುವುದನ್ನು ನೋಡ ಬೇಕೆಂದು ರಾಜನಿಗೆ ತೋರಿತು. ಅಂತಲೇ ಅವನು ಲೋಭಿಗೆ ಎರಡು ಚಿನ್ನದ ನಾಣ್ಯಗಳನ್ನು ಕೊಟ್ಟು, "ಇಬ್ಬರು ಮನುಷ್ಯರಿಗೆ ಘನ ರೀತಿಯಲ್ಲಿ ಔತಣದ ಊಟಕ್ಕೆ ಏರ್ಪಾಡು ಮಾಡಿಬಿಡಿ" ಎಂದನು.

"ಇಬ್ಬರು ಯಾರು?" ಎಂದು ಲೋಭಿ ಆಶ್ಚರ್ಯದಿಂದ ಕೇಳಲು,

"ನೀವೂ ನಾನೂ. ರಾಜವಂಶದವನಾದ ನಾನು ಒಬ್ಬಂಟಿಗನಾಗಿ ಭೋಜನ ಮಾಡುವುದಿಲ್ಲ." ಎಂದನು ರಾಜ.



ಮತ್ತೇನೂ ಹೇಳದೆ ಲೋಭಿ ಆ ದಿನ ರಾತ್ರಿಗೆ ಔತಣದ ಅಡಿಗೆ ಸಿದ್ಧಪಡಿಸಿದನು. ಆದರೆ ಲೋಭಿ ರಾಜನೊಂದಿಗೆ ಕುಳಿತು ಊಟಮಾಡಲೇ ಇಲ್ಲ. ಅವನು ಸ್ವಲ್ಪ ಹಣ ತೆಗೆದುಕೊಂಡು ಹೋಗಿ, ಊರೊಳಗಿರುವ ಇನ್ನೊಬ್ಬ ಮನುಷ್ಯನನ್ನು ಕರೆದು ತಂದು ಔತಣದ ಊಟಕ್ಕೆ ಕೂಡಿಸಿದನು.

ಊಟ ಮುಗಿಸಿದ ಮೇಲೆ ರಾಜನು ಲೋಭಿಯನ್ನು ನೋಡಿ, ನಾವು ಒಟ್ಟಿಗೆ ಕುಳಿತು ಭೋಜನ ಮಾಡಬೇಕೆಂದುಕೊಂಡರೆ, ನೀವು ಮತ್ತೊಬ್ಬನನ್ನು ಏಕೆ ಕರೆದು ತಂದಿರಿ? " ಎಂದು ಕೇಳಿದನು.

"ಹಾಗೆ ಔತಣದ ಊಟ ಹೊಟ್ಟೆ ತುಂಬಾ ಮಾಡಿಬಿಟ್ಟರೆ ಕಣ್ಣು ತುಂಬಾ ತೂಕಡಿಕೆ ಬಂದು ಬಿಡುತ್ತದೆ. ಆಮೇಲೆ ನನ್ನ ಹಣ ನನಗೆ ದಕ್ಕದು! ನಾಲಗೆಯೂ ಬಹಳ ಕೆಟ್ಟುದೇ. ಒಮ್ಮೆ ಅಪೂರ್ವ ರುಚಿಗಳನ್ನು ನೋಡಿಬಿಟ್ಟರೆ, ಮತ್ತೆ ಅಂತಹುದೇ ಬೇಕೆಂದು ಆಗಾಗ ಕಾಡುತ್ತದೆ" ಎಂದನು ಲೋಭಿ.

"ಭಲೆ! ನಿಮ್ಮ ಹಾಗಿನ ಲೋಭಿಗಳನ್ನು ನಾನೆಲ್ಲಿಯೂ ನೋಡಲಿಲ್ಲ. ನಿಜವನ್ನು ಹೇಳಲೇ? ನಾನು ಈ ದೇಶದ ರಾಜ. ವಿಶೇಷ ನೋಡುವ ಕುತೂಹಲದಲ್ಲಿ ಹೀಗೆ ಬಂದೆ. ನೀನು ನನ್ನ ಜತೆಯಲ್ಲಿ ರಾಜಧಾನಿಗೆ ಬರಬೇಕು. ನಿನ್ನನ್ನು ಮೀರಿಸುವ ಲೋಭಿ ಇಲ್ಲವೆಂಬುದು ರುಜುವಾದರೆ, ಈಗ ನಿನಗಿರುವ ಆಸ್ತಿಗೆ ಎರಡು ಪಾಲು ಹಣವನ್ನು ನಾನು ನಿನಗೆ ಕೊಡುತ್ತೇನೆ, ಬಹುಮಾನವಾಗಿ!" ಎಂದನು ರಾಜ.

ಹಣಕ್ಕೆ ಆಶೆಪಟ್ಟು ಲೋಭಿ ರಾಜನೊಂದಿಗೆ ಬರಲು ಒಪ್ಪಿಕೊಂಡನು. ರಾ ಂ ಗ್ರಾಮಾಧಿಕಾರಿಯನ್ನು ಕರೆಯಿಸಿ, ತಾನು ಯಾರೆಂಬುದನ್ನು ತಿಳಿಸಿ, ಲೋಭಿಯ ಮನೆಗೆ ಬಲವಾದ ಕಾವಲಿನ ಏರ್ಪಾಡು ಮಾಡಿಸಿದನು. ಆಮೇಲೆ ಲೋಭಿಯನ್ನು ಕರೆದುಕೊಂಡು ರಾಜಧಾನಿಗೆ ಹೋದನು.

ರಾಜನು ಮಂತ್ರಿಯೊಂದಿಗೆ ಆ ಲೋಭಿಯನ್ನು ಕುರಿತು ಎಲ್ಲಾ ವಿವರವನ್ನೂ ಹೇಳಿ, "ರಾಜ್ಯದಲ್ಲಿರುವ ಲೋಭಿಗಳ ನಡುವೆ ಒಂದು ಸ್ಪರ್ಧೆ ಏರ್ಪಡಿಸಬೇಕೆಂದಿದ್ದೇನೆ" ಎಂದನು.

"ಪ್ರಭೂ! ಇದು ಪ್ರಯೋಜನವಿಲ್ಲದ ಕೆಲಸ. ವಿನೋದಕ್ಕಾದರೂ ಒಂದು ಹದ್ದು ಇರಬೇಕಲ್ಲವೆ?" ಎಂದು ಆಕ್ಷೇಪಿಸಿದನು ಮಂತ್ರಿ.

"ಈ ಸ್ಪರ್ಧೆಯಿಂದಾಗುವ ಪ್ರಯೋಜನವೇನೆಂಬುದು ಆಮೇಲೆ ಗೊತ್ತಾಗುತ್ತದೆ. ಹೇಳಿದಂತೆ ಮಾಡಿರಿ" ಎಂದನು ರಾಜ ಖಂಡಿತವಾಗಿ.

ಮಂತ್ರಿ ಒಂದು ವಾರ ದಿನಗಳಲ್ಲಿ ರಾಜ್ಯದಲ್ಲಿರುವ ಲೋಭಿಗಳನ್ನೆಲ್ಲಾ ಒಂದುಗೂಡಿಸಿದನು. ಎಲ್ಲಾ ಲೋಭಿಗಳನ್ನೂ ಒಂದು ಕಡೆಯಲ್ಲಿ ಸಮಾವೇಶಗೊಳಿಸಿದನು.

ಸ್ಪರ್ಧೆಯ ಕ್ರಮ ಈ ರೀತಿಯಾಗಿತ್ತು: ಲೋಭಿಗಳಲ್ಲಿ ಯಾರಾದರೂ ಮುಂದೆ ಬಂದು ಮತ್ತೊಬ್ಬ

ಲೋಭಿಯನ್ನು ದಾನ ಕೇಳಬೇಕು. ಆ ಹಣವನ್ನು ರಾಜನೇ ಲೋಭಿಗೆ ಕೊಡುತ್ತಾನೆ. ಲೋಭಿ ಅದನ್ನು ದಾನ ಕೇಳಿದ ಲೋಭಿಗೆ ಕೊಡಬಹುದು. ಇಲ್ಲ ದಿದ್ದರೆ ಇಪ್ಪತ್ತೈದು ಚಾಟಿ ಏಟುಗಳನ್ನು ತಿಂದು ಆ ಹಣವನ್ನು ತಾನೇ ಇರಿಸಿಕೊಳ್ಳಲೂಬಹುದು. ಲೋಭಿಯನ್ನು ಕೇಳಿ ದಾನ ಪಡೆಯಲಾಗದೆ ಹೋದ ದುರದೃಷ್ಟವಂತನು ಒಂದೇಒಂದು ಚಾಟೀ ಏಟಿನ ಶಿಕ್ಷೆಯನ್ನು ಮಾತ್ರ ತಿನ್ನಬೇಕು.

ಅನೇಕಮಂದಿ ಲೋಭಿಗಳು ಚಾಟೀ ಏಟುಗಳನ್ನೇ ತಿಂದು, ರಾಜನು ಕೊಡುವ ಹಣವನ್ನು ತಾವೇ ಇಟ್ಟುಕೊಳ್ಳಬೇಕೆಂದು ಅಂದುಕೊಂಡರು. ಆದರೆ ಐದಾರು ಚಾಟೀ ಏಟುಗಳು ಬೀಳುತ್ತಲೇ, ನೋವನ್ನು ತಡೆಯಲಾಗದೆ, ರಾಜನು ಕೊಟ್ಟ ಹಣವನ್ನು ದಾನ ಕೊಟ್ಟುಬಿಟ್ಟರು. ಆಖೈರಿಗೆ ರಾಜನು ಗ್ರಾಮದಿಂದ ತನ್ನೊಂದಿಗೆ ಕರೆದುಕೊಂಡು ಬಂದ ಲೋಭಿಯ ಸರದಿ ಬಂತು. ಅವನ ಹತ್ತಿರ ದಾನ ಕೇಳಲು ಯಾವ ಲೋಭಿಯೂ ಮುಂದೆ ಬರಲಿಲ್ಲ.

ರಾಜನು ಅವರ ಕಡೆಗೆ ಆಶ್ಚರ್ಯದಿಂದ ನೋಡಿ, "ಇದುವರೆಗೆ ಈ ಸ್ಪರ್ಧೆಯಲ್ಲಿ ಪ್ರತಿಯೊಬ್ಬನೂ ಅಷ್ಟೋ ಇಷ್ಟೋ ಲಾಭ ಹೊಂದಿದ್ದಾನೆ. ಇನ್ನು ಒಬ್ಬನೇ ಉಳಿದವನು. ಅವನನ್ನು ದಾನ ಕೇಳಿರಿ. ಏಕೆ ಸುಮ್ಮನಿರುವಿರಿ ?" ಎಂದನು.

ಆಗ ಎಲ್ಲಾ ಲೋಭಿಗಳೂ ಏಕಕಂಠದಿಂದ, "ಪ್ರಭೂ, ಇವನ ಮುಖ ನೋಡುತ್ತಿದ್ದರೆ ಇಪ್ಪತ್ತೈದು ಚಾಟೀ ಏಟು ಮಾತ್ರವಲ್ಲ, ಪ್ರಾಣವೇ ಹೋಗುವುದಾದರೂ ತನಗೆ ಸಿಕ್ಕಿದ ಹಣವನ್ನು ಯಾರಿಗೂ ಕೊಡುವವನಲ್ಲವೆಂದು ಗೊತ್ತಾಗುತ್ತಿದೆ. ಕೇಳಿ ಇಲ್ಲವೆನ್ನಿಸಿಕೊಳ್ಳುವುದರಿಂದ ನಮಗೂ ಒಂದು ಚಾಟೀ ಏಟು ಬೀಳುತ್ತದಷ್ಟೇ. ಬೇಡವೇ ಬೇಡ ಮಹಾಪ್ರಭೂ !" ಎಂದರು.



ರಾಜನು ತನ್ನೊಂದಿಗೆ ಕರೆತಂದವನನ್ನು ಉತ್ತಮ ಲೋಭಿಯಾಗಿ ನಿರ್ಣಯಿಸಿದನು. ಅವನನ್ನು ಒಂದು ದೊಡ್ಡ ಭವನದೊಳಗೆ ಕರೆದುಕೊಂಡು ಹೋದನು. ಅದರೊಳಗೆ ರಾಜವಂಶಕ್ಕೆ ಸಂಬಂಧಪಟ್ಟ ಬೆಲೆ ಬಾಳುವ ಪುರಾತನ ವಸ್ತುಗಳೆಷ್ಟೋ ಇದ್ದುವು. ಹಾಲುಗಲ್ಲಿನ ಶಿಲ್ಪಗಳು, ವಜ್ರ ವೈಡೂರ್ಯಗಳು ಹೊದಿಸಲ್ಪಟ್ಟ ಹಿಡಿಕೆಗಳುಳ್ಳ ಖಡ್ಗಗಳು, ಬಂಗಾರದ ನೂಲುಗಳಿಂದ ನೇಯಲ್ಪಟ್ಟ ವಸ್ತ್ರಗಳು, ಚಿನ್ನ ಬೆಳ್ಳಿಗಳ ಪಾತ್ರೆಗಳು, ಆಭರಣಗಳು ಮುಂತಾದ ಅನರ್ಘ್ಯ ವಸ್ತುಗಳು ಅಲ್ಲಿದ್ದುವು.

ಅವುಗಳನ್ನು ನೋಡುತ್ತ ಆಶ್ಚರ್ಯಪಡುತ್ತಿರುವ ಲೋಭಿಯನ್ನು ನೋಡಿ ರಾಜನು, "ಈ ಇಡೀ ಭವನವನ್ನೇ ಈ ಎಲ್ಲಾ ವಸ್ತುಗಳೊಂದಿಗೆ ನಿನಗೆ ಬಹುಮಾನವಾಗಿ ಕೊಟ್ಟುಬಿಡುತ್ತೇನೆ. ಇಲ್ಲಿಯೇ ಇದ್ದುಬಿಡುವೆಯಾ ?" ಎಂದನು. ಲೋಭಿ ಬೆಪ್ಪುಬಿದ್ದು, ಕೂಡಲೇ ಎಚ್ಚೆತ್ತು,

"ಇದಕ್ಕಿಂತ ಹೆಚ್ಚಿನ ಅದೃಷ್ಟ ಇನ್ನೇನಿದೆ ಪ್ರಭೂ ! ಆದರೆ ನನ್ನ ಆಸ್ತಿ ಸೊತ್ತೆಲ್ಲ ಆ ಗ್ರಾಮದಲ್ಲೇ ಇದೆಯಲ್ಲಾ ! ಅದನ್ನು ಹೇಗೆ ಬಿಟ್ಟಿರಲಿ ? " ಎಂದನು.

"ಅದಕ್ಕೇನಿದೆ ? ಅಲ್ಲಿರುವ ಆಸ್ತಿ ಸರ್ವಸ್ವವನ್ನೂ ಬಂಗಾರವಾಗಿ ಬದಲಾಯಿಸಿ ಈ ಭವನಕ್ಕೆ ತರಿಸಿಕೊಡುತ್ತೇನೆ." ಎಂದನು ರಾಜ.

ಇದಕ್ಕೆ ಲೋಭಿ ಸಂತೋಷದಿಂದ ಒಪ್ಪಿದನು. ರಾಜನು ಅವನಿಗೆ ಉಚಿತವಾಗಿ ಭೋಜನ ಸದುಪಾಯಗಳನ್ನೂ ಮಾಡಿಸಿ ಕೊಟ್ಟನು.

ಬೇತಾಳವು ಹೀಗೆ ಕಥೆಯನ್ನು ಮುಗಿಸಿ, " ರಾಜಾ, ವಜ್ರಪುರಿಯ ರಾಜನಾದ ಚಂದ್ರಸೇನನಿಗಿಂತಲೂ ಅವಿವೇಕಿಯಾದವನು ಎಲ್ಲಾದರೂ ಇರುವನೆ ? ತಲೆತಲಾಂತರಗಳಿಂದ ತನ್ನ ಪೂರ್ವಿಕರು ಸೇರಿಸಿಟ್ಟ ಅಪಾರವಾದ ಧನಸಂಪತ್ತುಗಳನ್ನು ಒಬ್ಬ ಲೋಭಿಗೆ ಕೊಟ್ಟು ಬಿಡುವುದೆಂದರೆ ಎಂತಹ ಮೂರ್ಖತನ ? ಇಂತಹ ರಾಜನು ಹೇಗೆ ತಾನೇ ಪ್ರಜಾಪಾಲನೆ ಮಾಡಲು ಸಾಧ್ಯ ? ಈ ಸಂದೇಹಕ್ಕೆ ತಕ್ಕ ಸಮಾಧಾನ ತಿಳಿದಿದ್ದೂ ಹೇಳದೆ ಹೋದರೆ ನಿನ್ನ ತಲೆಯೊಡೆದು ಪುಡಿಪುಡಿಯಾಗುತ್ತದೆ " ಎಂದು ಹೇಳಿ ಸುಮ್ಮನಾಯಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದನು :

" ಚಂದ್ರಸೇನನು ಅಂತಹ ಅವಿವೇಕಿಯೂ ಅಲ್ಲ, ಮೂರ್ಖನೂ ಅಲ್ಲ. ಅವನು ಮೊದಲೇ ಒಂದು ಯೋಜನೆ ಹಾಕಿಕೊಂಡು, ಆ ಪ್ರಕಾರ ಲೋಭಿಯನ್ನು ಕರೆದುತಂದು, ಪರೀಕ್ಷೆ ಇಟ್ಟು ಎಲ್ಲರಿಗಿಂತ ಹೆಚ್ಚು ಲೋಭಿ ಹೇಗಿರುವನೆಂಬುದನ್ನು ತಿಳಿದು ತನ್ನ ಕೆಲಸಕ್ಕೆ ಅವನಿಗಿಂತ ಉತ್ತಮನು ದೊರೆಯಲಾರನೆಂದು ನಿರ್ಧರಿಸಿಕೊಂಡನು. ಲೋಭಿಗೆ ಹಣವೇ ಸರ್ವಸ್ವವಾಗಿರುತ್ತದೆ. ಬೇರೆ ಯಾವ ಸುಖಗಳೂ ಅವನಿಗೆ ಬೇಡ. ಅವನು ಹಣಕ್ಕೆ ಕಾವಲಾಗುತ್ತಾನೆಯೇಹೊರತು ಖರ್ಚು ಮಾಡಲಾರ. ಹಿಂದಿನ ರಾಜರು ಕೂಡಿಸಿಟ್ಟಿದ್ದ ಬೆಲೆಬಾಳುವ ವಸ್ತುಗಳನ್ನು ಕಳವು ಮಾಡಿಕೊಂಡೊಯ್ಯಲು ಅನೇಕರು ಹೊಂಚು ಹಾಕಿಕೊಂಡಿರುತ್ತಾರೆ. ಅದಕ್ಕಾಗಿ ನಂಬಿಗಸ್ತನಾದ ಕಾವಲಿನವನು ಬೇಕಾಗಿತ್ತು. ಅಂತಲೇ ಚಂದ್ರಸೇನನು ತಾನು ಕರೆದುಕೊಂಡು ಬಂದ ಲೋಭಿಯೇ ಈ ಕೆಲಸಕ್ಕೆ ಸರಿಯಾದವನೆಂದು ಮನಸ್ಸಿನಲ್ಲಿಯೇ ತೀರ್ಮಾನಿಸಿ ನಿಯಮಿಸಿದನು. ಆ ಲೋಭಿ ಆ ಭವನಕ್ಕೆಲ್ಲಾ ತಾನೇ ಹಕ್ಕುದಾರನೆಂದು ತಿಳಿದುಕೊಳ್ಳಬಹುದು. ವಾಸ್ತವಕ್ಕೂ, ಅವನು ಅದರ ಕಾವಲಿನವನು ಮಾತ್ರವೇ ! "

ಹೀಗೆ ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವದೊಂದಿಗೆ ಮಾಯವಾಗಿ ಹೋಗಿ ಮರದಕೊಂಬೆಗೆ ನೇತಾಡಿಕೊಂಡಿತು.






# ಪ್ರಾಮಾಣಿಕನಾರು?

ಅನೇಕ ವರ್ಷಗಳ ಹಿಂದೆ ಆನಂದಪುರದ ಸಂಸ್ಥಾನದ ಜಮೀನ್ದಾರ ಜಗನ್ನಾಥ ಪ್ರಭುಗಳ ಎರಡನೆಯ ಮಗಳಾದ ಸುಂದರಿಯ ಮದುವೆಯನ್ನು ಬಹಳ ವೈಭವದಿಂದ ಮಾಡಬೇಕೆಂದು ಎಣಿಸಿದರು. ಅವಳಿಗಾಗಿ ಬೆಲೆಬಾಳುವ ಆಭರಣಗಳು ಬೇಕಾಗಿದ್ದುವು. ಅವುಗಳನ್ನು ಮಾಡಿಸಲು ಪ್ರಾಮಾಣಿಕರಾದ ಸ್ವರ್ಣಕಾರರನ್ನು ಕರೆಯಿಸಬೇಕೆಂದು ಅವರು ತಮ್ಮ ದಿವಾನನಿಗೆ ಹೇಳಿದರು.

ಈ ಮೊದಲು ಜಮೀನ್ದಾರರು ತಮ್ಮ ದೊಡ್ಡ ಮಗಳು ಮಾಲತಿಯ ಮದುವೆಗೆ ಮಾಡಿಸಿದ ಆಭರಣಗಳಲ್ಲಿ ಸ್ವರ್ಣಕಾರನು ತುಂಬಾ ಕಲಬೆರಕೆಮಾಡಿ ನಾಣ್ಯತೆ ಕೆಡುವ ಹಾಗೆಮಾಡಿದ ಸಂಗತಿ ಮತ್ತೆಗೊತ್ತಾಗಿತ್ತು. ಆದರಿಂದಾಗಿ ದೊಡ್ಡ ರಾದ್ಧಾಂತವಾಗಿತ್ತು. ಈ ಸಾರಿ ಅಂತಹ ಮೋಸ ನಡೆಯದಂತೆ ಜಾಗರೂಕತೆ ವಹಿಸಿದ್ದರು ಜಮೀನ್ದಾರರು.

ಸುಂದರಿಯ ಮದುವೆಯ ವಿಷಯ ತಿಳಿದ ಕೂಡಲೇ ಅವಳಿಗೆ ಆಭರಣಗಳನ್ನು ನಾವು ಮಾಡುತ್ತೇವೆಂದು ಅನೇಕ ಮಂದಿ ಸ್ವರ್ಣಕಾರರು ಜಮೀನ್ದಾರರ ದಿವಾಣಕ್ಕೆ ಬಂದರು. ಅವರೆಲ್ಲಾ ಬಹಳ ಒಳ್ಳೆಯವರಂತೆಯೇ ಮಾತಾಡುತ್ತಿದ್ದರು. ತಮ್ಮ ಗಟ್ಟಿಗತನವನ್ನು ತೋರಿಸುವ ಮಾದರಿಗಳನ್ನು ತಂದಿದ್ದರು. ಅವರಲ್ಲಿ ಅನೇಕರು ಶುದ್ಧ ವಂಚಕರೆಂದು ದಿವಾನನಿಗೆ ಗೊತ್ತಿತ್ತು. ಆದುದರಿಂದ ದಿವಾನನು ಅವರೆಲ್ಲರನ್ನೂ ಏನೋ ಹೇಳಿ ಕಳುಹಿಸಿದನು.

ಆನಂದಪುರದಲ್ಲಿ ಆ ವರ್ಷ ಹೊಸದಾಗಿ ವೃತ್ತಿ ಪ್ರಾರಂಭಿಸಿದ ಮೂವರು ಸ್ವರ್ಣಕಾರರಿದ್ದರು. ವೀರಪ್ಪ, ಬಂಗಾರಪ್ಪ ಮತ್ತು ಬರಮಪ್ಪ ಎಂಬುದು ಅವರ ಹೆಸರು. ಈ ಮೂವರಲ್ಲಿ ಯಾರೋ ಒಬ್ಬರಿಗೆ ವಿವಾಹಕ್ಕೆ ಬೇಕಾದ ಆಭರಣಗಳನ್ನು ಮಾಡುವ ಕೆಲಸ ಒಪ್ಪಿಸ ಬಹುದೆಂದು ದಿವಾನನು ಅಂದುಕೊಂಡನು. ಅವರ ಚಾಣಾಕ್ಷ್ಯೆಯನ್ನು ಕುರಿತು ದಿವಾಣದ ಉದ್ಯೋಗಸ್ಥರು ಶ್ಲಾಘಿಸಿ ಹೇಳಿದರು.

ದಿವಾನನು ಆ ಮೂವರನ್ನೂ ಕರೆಯಿಸಿ, ಅವರಿಗೆ ಮಾಲತಿಯ ಆಭರಣಗಳಲ್ಲಿ ತಲಾ ಒಂದೊಂದನ್ನು ಕೊಟ್ಟು, ಅವುಗಳ ನಾಣ್ಯತೆ ಹೇಗಿದೆಯೆಂದು ಹೇಳಬೇಕೆಂದನು. ಮರುದಿನ ಮೂವರು ಸ್ವರ್ಣಕಾರರೂ ದಿವಾನನಲ್ಲಿ ಬಂದುದನ್ನು ತಿಳಿದು, ಜಮೀನ್ದಾರ ಜಗನ್ನಾಥ ಪ್ರಭುಗಳೂ ಅಲ್ಲಿಗೆ ಬಂದು ಕುಳಿತರು.

ವೀರಪ್ಪನು ತಾನು ತೆಗೆದುಕೊಂಡು ಹೋದ ಆಭರಣವನ್ನು ದಿವಾನನ ಮುಂದಿಟ್ಟು, "ಅಯ್ಯಾ, ಇದನ್ನು ಯಾರು ಮಾಡಿದರೋ ಏನೋ! ಇದರಲ್ಲಿ ಎರಡು ಪಾಲು ತಾಮ್ರವಿದೆ. ಸ್ವಚ್ಛವಾದ ಬಂಗಾರ ಒಂದು ಪಾಲು ಮಾತ್ರವೇ ಇದೆ. ಶುದ್ಧ ಮೋಸ" ಎಂದನು.

ಬಂಗಾರಪ್ಪನು ತಾನು ತೆಗೆದುಕೊಂಡು ಹೋದ ಆಭರಣವನ್ನು ದಿವಾನನಿಗೆ ತೋರಿಸುತ್ತ, "ಅಯ್ಯಾ, ಈ ಆಭರಣ ಮಾಡಿದವನು ದೊಡ್ಡ ಮೋಸಗಾರನೇ ಸರಿ. ಇದರಲ್ಲಿ ಒಂದು ಪಾಲು ತಾಮ್ರವನ್ನೂ ಮತ್ತೊಂದು ಪಾಲು ಹಿತ್ತಾಳೆಯನ್ನೂ ಬೆರೆಸಿದ್ದಾನೆ. ಇನ್ನು ಉಳಿದ ಒಂದು ಪಾಲು ಮಾತ್ರವೇ ಅಪ್ಪಟ ಬಂಗಾರ" ಎಂದನು.

ಬರಮಪ್ಪನು ಕೂಡಾ ತನಗೆ ಕೊಟ್ಟ ಆಭರಣ ವನ್ನು ಕುರಿತು, "ಅಯ್ಯಾ, ಇದರಲ್ಲಿ ಒಂದು ಪಾಲು ಮಾತ್ರವೇ ಸ್ವಚ್ಛವಾದ ಬಂಗಾರವಿದೆ. ಉಳಿದ ಮೂರು ಪಾಲು ಬಂಗಾರವಲ್ಲ" ಎಂದನು.

ದಿವಾನನು ಆ ಮೂವರನ್ನೂ ಕಳುಹಿಸಿ, ಆ ಮೇಲೆ ಜಮೀನ್ದಾರರೊಂದಿಗೆ, "ಇನ್ನೇನೂ ಸಂದೇಹಪಡ ಬೇಕಾಗಿಲ್ಲ. ಈ ಮೂವರಲ್ಲಿ ನಮ್ಮ ಆಭರಣಮಾಡುವ ಕೆಲಸವನ್ನು ಬರಮಪ್ಪನಿಗೇ ಧಾರಾಳವಾಗಿ ಒಪ್ಪಿಸ ಬಹುದು" ಎಂದನು.

ಜಮೀನ್ದಾರರು ಆಶ್ಚರ್ಯವನ್ನು ವ್ಯಕ್ತಪಡಿಸಿ, "ಇವರಲ್ಲಿ ಬರಮಪ್ಪನು ಪ್ರಾಮಾಣಿಕನೆಂದು ಹೇಗೆ ಗೊತ್ತಾಯಿತು?" ಎಂದು ಕೇಳಿದರು.

ದಿವಾನನು ಹೀಗೆಂದನು: "ವೀರಪ್ಪನಿಗೂ, ಬಂಗಾರಪ್ಪನಿಗೂ ಬಂಗಾರದೊಂದಿಗೆ ಕಲಬೆರಿಕೆ ಮಾಡುವ ಅಭ್ಯಾಸವಿದ್ದುದರಿಂದಲೇ ಮೊದಲು ಬಂಗಾರದಲ್ಲಿ ಬೆರೆತ ಬೇರೆ ಲೋಹಗಳ ಮಾತನ್ನು ಹೇಳಿ. ಆಮೇಲೆ ಇರುವ ಬಂಗಾರ ಇಷ್ಟು ಅಂತ ಹೇಳಿದ್ದಾರೆ. ಬರಮಪ್ಪನಲ್ಲಿ ಅಂತಹ ಮೋಸದ ಗುಣ ವಿಲ್ಲದುದರಿಂದಲೇ ಅವನು ಮೊದಲು ಆಭರಣ ದಲ್ಲಿರುವ ಬಂಗಾರದ ಪಾಲನ್ನು ಹೇಳಿ, ಉಳಿದುವು ಬಂಗಾರವಲ್ಲವೆಂದಷ್ಟೇ ಹೇಳಿ ಸುಮ್ಮನಾದನು. ಇದರಿಂದ ಅವನು ಪ್ರಾಮಾಣಿಕನೆಂಬ ನಂಬುಗೆ ನನಗಾಯಿತು. ಕಳ್ಳರ ಬಾಯಿ ಕದಿಯುವ ಸೌಲಭ್ಯದ ಲೆಕ್ಕವನ್ನೇ ಮೊದಲು ಹೇಳುತ್ತದೆಂದು ಹಿರಿಯರು ಹೇಳುತ್ತಾರೆ."

ದಿವಾನನ ತರ್ಕವು ಜಮೀನ್ದಾರರಿಗೆ ಸಮಂಜಸ ವೆನಿಸಿತು. ಅವರು ಬಹಳ ಸಂತೋಷಪಟ್ಟು, ತಮ್ಮ ಕುಮಾರಿಯ ಆಭರಣಗಳನ್ನು ಮಾಡುವ ಕೆಲಸವನ್ನು ಬರಮಪ್ಪನಿಗೇ ಒಪ್ಪಿಸಿದರು. ಪರಿಣಾಮವಾಗಿ ದಿವಾನನ ಮಾತು ಹುಸಿ ಹೋಗಲಿಲ್ಲವೆಂದೂ ಫಲಿತ ಪರೀಕ್ಷೆಯಲ್ಲಿ ಗೊತ್ತಾಯಿತು.





# ದುಷ್ಟಸಂಕಲ್ಪ

ಹಿಂದೆ ಒಂದು ಕಾಲದಲ್ಲಿ ಸಿದ್ದಾಪುರವೆಂಬ ಊರಿನಲ್ಲಿ ಸೂರಣ್ಣ, ವೀರಣ್ಣ ಎಂಬ ಯುವಕರು ಹೆಚ್ಚು ಕಡಿಮೆ ಒಂದೇ ವಯಸ್ಸಿನವರಾಗಿದ್ದರು. ಸೂರಣ್ಣನಿಗೆ ಊರ ಹೊರಗಿನ ಅಡವಿಯ ಹತ್ತಿರ ನಾಲ್ಕು ಎಕರೆಗಳಷ್ಟು ಬೆಟ್ಟುಗದ್ದೆಗಳಿದ್ದುವು. ಎತ್ತರ ಪ್ರದೇಶದಲ್ಲಿ ನೀರಿನಾಶ್ರಯ ಕಡಿಮೆಯಾಗಿ, ವರ್ಷಕ್ಕೊಮ್ಮೆ ಬೆಳೆ ಬರುವ ಹೊಲಗಳಾದರೂ. ಉಳಿದ ಕಾಲಗಳಲ್ಲಿ ಧಾನ್ಯಗಳನ್ನು ಬೆಳೆಸಿ ಸೂರಣ್ಣನು ಈ ಬಗೆಯ ವ್ಯವಸಾಯದಿಂದಲೇ ಜೀವನ ಸಾಗಿಸುತ್ತಿದ್ದನು.

ವೀರಣ್ಣನಿಗೆ ಆಸ್ತಿಪಾಸ್ತಿಗಳೇನೂ ಇರಲಿಲ್ಲ. ಕಾಡಿನೊಳಗಿನ ವಸ್ತುಗಳನ್ನು ಸಂಗ್ರಹಿಸಿ, ಸೌದೆಗಳನ್ನು ತಯಾರಿಸಿ ಅವುಗಳನ್ನು ಊರೊಳಗೆ ಮಾರಿ ವೀರಣ್ಣನು ದಿನಗಳೆಯುತ್ತಿದ್ದನು.

ಇಷ್ಟೇ ಅಲ್ಲದೆ ಸೂರಣ್ಣನೂ ವೀರಣ್ಣನೂ ಸಾಮು ಗರಡಿಗಳಲ್ಲಿ ಅಭ್ಯಾಸ ಮಾಡಿದ ಗಟ್ಟಿಗರಾಗಿದ್ದರು. ಇಬ್ಬರ ಮೈ ಮಾಟಗಳೂ ಚೆನ್ನಾಗಿದ್ದಿತು. ಜಟ್ಟಿ ಕಾಳಗದಲ್ಲಿ ಇಬ್ಬರಿಗೂ ಒಳ್ಳೆಯ ಹೆಸರಿತ್ತು. ಪ್ರತಿ ವರ್ಷ ನವರಾತ್ರಿ ಹಬ್ಬದ ದಿನಗಳಲ್ಲಿ ನಡೆಯುವ ಪ್ರದರ್ಶನಗಳಲ್ಲಿ ಪ್ರತಿ ಸಾರಿಯೂ ವೀರಣ್ಣ ಮೊದಲನೆಯವನಾಗಿಯೂ, ಸೂರಣ್ಣ ಎರಡನೆಯವನಾಗಿಯೂ ಬರುತ್ತಿದ್ದರು. ಗೆದ್ದ ವೀರಣ್ಣನಿಗೆ ಬಹುಮಾನಗಳೂ ಗೌರವ ಮರ್ಯಾದೆಗಳೂ ನಡೆಯುತ್ತಿದ್ದವು. ಸೂರಣ್ಣನಿಗೂ ಗೌರವ ಬಹುಮಾನಗಳು ದೊರೆಯುವುವಾದರೂ ಎರಡನೆಯ ಸ್ಥಾನವೆಂಬ ಕೊರತೆ ತಪ್ಪುತಿದ್ದಿಲ್ಲ.

ಈ ಕಾರಣದಿಂದ ಸೂರಣ್ಣನಿಗೆ ವೀರಣ್ಣನ ಮೇಲೆ ಅಸೂಯೆ ತಲೆಯೆತ್ತಿಕೊಂಡಿತ್ತು. ಅದು ಕ್ರಮವಾಗಿ ಬೆಳೆದು ವೀರಣ್ಣನನ್ನು ಇಲ್ಲದಂತೆ ಮಾಡಬೇಕೆಂಬ ಹಗೆಯಾಗಿ ಮಾರ್ಪಟ್ಟಿತು.

ಹೀಗಿರುವಾಗ ಒಬ್ಬ ಸಾಧು ದಕ್ಷಿಣ ದೇಶದಿಂದ ಕಾಶಿಯ ಕಡೆಗೆ ಪ್ರಯಾಣ ಮಾಡುತ್ತ, ಸೂರಣ್ಣನ ಹೊಲಗಳ ಪಕ್ಕದಲ್ಲಿರುವ ಕಾಡಿನಲ್ಲಿ ಒಂದು ಮರದ ಕೆಳಗೆ, ನಾಲ್ಕು ದಿನಗಳವರೆಗೆ ನಿವಾಸ ಏರ್ಪಡಿಸಿಕೊಂಡನು. ಅಂತಹ ತಪಸ್ವಿಗಳ ಹತ್ತಿರ ಅಮಾನುಷ ಶಕ್ತಿಯ ಮಹಿಮೆಗಳಿರುತ್ತವೆಂದು ಸೂರಣ್ಣನು ಕೇಳಿದ್ದನು. ಅಂತಲೇ ಅವನು ಅತ್ಯಂತ ವಿನಯ ವಿಧೇಯತೆಗಳಿಂದಲೂ, ಭಕ್ತಿಶ್ರದ್ಧೆಗಳಿಂದಲೂ ಆ ಸಾಧುವಿಗೆ ಹಣ್ಣು ಹಂಪಲುಗಳನ್ನು ಸಮರ್ಪಿಸುತ್ತ,

ಜೆ. ಸಾಂಬ



ನಮಸ್ಕರಿಸುತ್ತ, ಅವನ ಆದರಕ್ಕೆ ಪಾತ್ರನಾದನು. ನಾಲ್ಕನೆಯ ದಿನ ಸಾಧು ಮುಂದಿನ ಪ್ರಯಾಣಕ್ಕೆ ಸಿದ್ಧನಾಗಿ ಸೂರಣ್ಣನನ್ನು ನೋಡಿ, "ಅಪ್ಪಾ, ನೀನು ವಯಸ್ಸಿನಲ್ಲಿ ಚಿಕ್ಕವನಾದರೂ, ಸಾಧು ಸನ್ಯಾಸಿಗಳ ಮೇಲೆ ನಿನಗಿರುವ ಭಕ್ತಿ ಗೌರವಗಳನ್ನು ನೋಡಿ ನನಗೆ ಬಹಳ ಸಂತೋಷವಾಗಿದೆ. ನಿನಗೇನಾದರೂ ನನ್ನ ವಿಶೇಷ ಸಹಾಯ ಬೇಕಾಗಿದ್ದರೆ ಕೇಳಿಕೋ. ನಾಳೆ ಬೆಳಗಾವದಲ್ಲೇ ನಾನು ಇಲ್ಲಿಂದ ಹೊರಟು ಬಿಡುತ್ತೇನೆ" ಎಂದನು.

ಇಂತಹ ಸಮಯಕ್ಕಾಗಿಯೇ ಕಾದುಕೊಂಡಿದ್ದ ಸೂರಣ್ಣನು, ವೀರಣ್ಣನನ್ನು ಹತ ಮಾಡಲು ಗಟ್ಟಿಯಾದೊಂದು ಉಪಾಯವನ್ನು ಆಲೋಚಿಸಿ, ಸಾಧುವಿನ ಮುಂದೆ ಕೈ ಮುಗಿದು, "ಅಯ್ಯಾ, ಮತ್ತೇನಿಲ್ಲ, ಈ ಅರಣ್ಯದ ಪಕ್ಕದಲ್ಲಿರುವ ನನ್ನ ಹೊಲಗಳಿಗೆ ಕಾಡುಕೋಣ ಮೊದಲಾದ ಪ್ರಾಣಿಗಳಿಂದ ಹಾನಿಯಾಗುತ್ತಾ ಇರುತ್ತದೆ. ಅವುಗಳನ್ನು ಹೆದರಿಸಲಿಕ್ಕಾಗಿ, ನಾನು ನೆನೆಸಿದಾಗ ನನಗೆ ಯಾವ ಕ್ರೂರಮೃಗದ ರೂಪವೋ ಬರುವ ಹಾಗೆ ಮಾಡಿದರೆ ಸಾಕು. ಇಷ್ಟೊಂದು ಅನುಗ್ರಹ ತೋರಿಸಬೇಕು ಸ್ವಾಮಿ" ಎಂದನು.

ಸಾಧು ಸೂರಣ್ಣನ ಮುಖವನ್ನು ಪರೀಕ್ಷಿಸಿ ನೋಡಿ ಸಣ್ಣದೊಂದು ನಗುವನ್ನು ಬೀರಿ, ತನ್ನ ಸಂಚಿಯೊಳಗಿನಿಂದ ಮೂರು ಮೂಲಿಕೆಗಳನ್ನು ತೆಗೆದು ಮಂತ್ರಿಸಿ ಅವನಿಗೆ ಕೊಡುತ್ತ, "ಇದು ನಿನಗೆ ಬೇಕೆನಿಸಿದಾಗ, ಮೂರು ಸಾರಿ ಮಾತ್ರ ಉಪಯೋಗಕ್ಕೆ ಬರುತ್ತದೆ. ಈ ಮೂಲಿಕೆಯನ್ನು ಬಾಯಿಯಲ್ಲಿ ಹಾಕಿ ಜಗಿಯುತ್ತ, ಯಾವ ಪ್ರಾಣಿಯ ರೂಪ ಬೇಕೋ ಅದನ್ನು ನೆನೆದುಕೋ. ಆ ಪ್ರಾಣಿಯ ರೂಪ ನಿನಗೆ ಬರುತ್ತದೆ. ಆ ಪ್ರಾಣಿಯ ಶರೀರಕ್ಕೇನಾದರೂ ಪೆಟ್ಟಾದರೂ, ಅಥವಾ ಯಥಾ ರೂಪ ಬರಬೇಕೆಂದು ನೆನೆದುಕೊಂಡರೂ ಮೊದಲಿನ ರೂಪ ಬಂದು ಬಿಡುತ್ತದೆ. ಇದು ನಿನಗೆ ಉಪಯೋಗವಾಗಬಹುದು." ಎಂದು ಹೇಳಿದನು.

ಅಂದಿನಿಂದ ಸೂರಣ್ಣನು ವೀರಣ್ಣನನ್ನು ಕೊನೆಗಾಣಿಸಲು ತಕ್ಕ ಸಮಯವು ಯಾವಾಗ ಬರುತ್ತದೋ ಎಂದು ಇದಿರು ನೋಡಲು ತೊಡಗಿದನು. ಬೇಗದಲ್ಲೇ ಒಂದು ದಿನ ಅದಕ್ಕೊಂದು ಸಂದರ್ಭ ಬಂದಿತು.

ಆ ದಿನ ಮಧ್ಯಾಹ್ನದ ವೇಳೆಯಲ್ಲಿ ವೀರಣ್ಣನು ಎಂದಿನಂತೆ ಕಾಡಿನೊಳಗೆ ಹೋಗುವುದನ್ನು ಸೂರಣ್ಣನು ನೋಡಿದನು. ಅವನು ವೀರಣ್ಣನಿಗೆ ತಿಳಿಯದಂತೆ ಅವನ ಹಿಂದೆಯೇ ಹೊರಟನು. ಕಾಡಿನೊಳಗೆ ಮರಗಳ ಮರೆಯಲ್ಲಿ ಸಾಧು ಕೊಟ್ಟ ಮಹಿಮೆಯ ಮೂಲಿಕೆಗಳಲ್ಲಿ ಒಂದನ್ನು ಬಾಯಿಯೊಳಗೆ ಹಾಕಿ ಜಗಿಯುತ್ತಾ ಕರಡಿಯಾಗಿ ಮಾರ್ಪಟ್ಟನು. ವೀರಣ್ಣನು ಕಾಡಿನಿಂದ ಹಿಂದಿರುಗಿ ಬರುವಾಗ ಥಕ್ಕನೆ ಅವನ ಮೇಲೆ ಹಾರಿ ಕೊಂದು ಬಿಡಬೇಕೆಂಬುದು ಸೂರಣ್ಣನ ಆಲೋಚನೆ.



ಸೂರ್ಯನು ಅಸ್ತಮಿಸಲು ಇನ್ನೂ ಸ್ವಲ್ಪ ಹೊತ್ತಿರುವುದೆನ್ನುವಾಗ, ವೀರಣ್ಣನು ತನಗೆ ಬೇಕಾದುದನ್ನು ಸಂಗ್ರಹಿಸಿಕೊಂಡು ಹಿಂದಿರುಗುತ್ತಿದ್ದನು. ಆಗ ಕರಡಿ ಸೂರಣ್ಣನು ಪೊದರುಗಳೆಡೆಯಲ್ಲಿ ಹೊಂಚುತ್ತ, ವೀರಣ್ಣನ ಮೇಲೆ ಹಾರಲು ಗುರಿ ನೋಡುತ್ತ ಬರುತ್ತಿದ್ದನು. ಆಗ ಮೂರನೇ ಮನುಷ್ಯನೊಬ್ಬ ಮರಗಳಾಚೆಯಿಂದ ಹೊರಕ್ಕೆ ಬಂದು ಉರುಳಿನ ಹಗ್ಗವನ್ನು ಗಿರಿಗಿರಿ ತಿರುಗಿಸುತ್ತಾ "ವೀರಣ್ಣಾ, ಬದಿಗೆ ತಪ್ಪಿಸಿಕೋ. ಬಂದ ಕೆಲಸ ವೃಥಾ ಆಗಲಿಲ್ಲ. ಕರಡಿಯೊಂದು ಸಿಕ್ಕೇ ಸಿಕ್ಕಿತು" ಎಂದು ಕೂಗಿ ಕರಡಿಯ ಮೇಲೆ ಹಗ್ಗ ಬಿಸುಟನು.

ಅವನು ಬಹುಗಟ್ಟಿಗನಾದ ಬೇಟೆಗಾರನೇ. ಅರಣ್ಯದಲ್ಲಿ ದೊರಕುವ ಕ್ರೂರಮೃಗಗಳನ್ನು ಹಿಡಿದುಕೊಂಡು ನಗರದಲ್ಲಿರುವ ಪ್ರಾಣಿ ಪ್ರದರ್ಶನ ಶಾಲೆಗೆ ಮಾರುತ್ತಾ ಇರುವವನು. ಅವನು ಸೂರಣ್ಣ, ವೀರಣ್ಣ ಇಬ್ಬರಿಗೂ ಪರಿಚಯದವನೇ. ತೀರಾ ಸಮೀಪಿಸಿದ ಕರಡಿಯಿಂದ ವೀರಣ್ಣನನ್ನು ತಪ್ಪಿಸಲಿಕ್ಕಾಗಿಯೇ ಅವನು ಕೂಗಿದುದರಿಂದ, ಕರಡಿಯಿಂದ ವೀರಣ್ಣನು ತಪ್ಪಿದರೂ, ಕರಡಿ ಕೂಡಾ ಆಚೆಗೆ ಹಾರಿ ತಪ್ಪಿಸಿಕೊಂಡಿತು.

ಬೇಟೆಗಾರನನ್ನು ನೋಡಿದ ಕೂಡಲೇ ಸೂರಣ್ಣನು ಬದುಕು ಬಡಜೀವವೇ ಎಂದುಕೊಂಡು ಆಚೆಗೆ ಹಾರಿ ಮರಗಳೆಡೆಯಲ್ಲಿ ತೂರಿ, ಬಹಳ ದೂರ ಓಡಿಹೋಗಿ ಮತ್ತೆ ನಿಜರೂಪ ಬರಬೇಕೆಂದು ನೆನೆದುಕೊಂಡನು.

ಅಷ್ಟರಲ್ಲಿ ಕರಡಿಯನ್ನು ಓಡಿಸಿಕೊಂಡು ಬಂದ ಬೇಟೆಗಾರನೂ ವೀರಣ್ಣನೂ ಸೂರಣ್ಣನನ್ನು ನೋಡಿ "ಈ ಕಡೆಗೇ ಒಂದು ಕರಡಿ ಬಂತಲ್ಲಾ, ನೋಡಿದಿಯಾ? ಎತ್ತ ಹೋಯಿತು?" ಎಂದು ಕೇಳಿದರು. ಸೂರಣ್ಣ ಏನೂ ಅರಿಯದವನಂತೆ ಮುಖ ಮಾಡಿಕೊಂಡು, ತಾನೇನೂ ಅರಿಯೆನಲ್ಲಾ ಎಂದನು.

ಮತ್ತೆ ಅವರೆಲ್ಲ ಅವರವರ ಮನೆ ಸೇರಿದರು. ಈ ವಿಧವಾಗಿ ಸಾಧು ಸೂರಣ್ಣನಿಗೆ ಕೊಟ್ಟ ಮೂಲಿಕೆಗಳಲ್ಲಿ ಒಂದು ವೃಥಾ ಆಗಿಹೋಯಿತು. ಮಾರನೇ ದಿನ ವೀರಣ್ಣನು ಸೌದೆ ಕಡಿಯಲು ಕಾಡಿಗೆ ಹೋಗುವನೆಂದು ಸೂರಣ್ಣನಿಗೆ ಗೊತ್ತಾಗಿತ್ತು. ಅಂತಲೇ ಸೂರಣ್ಣನು ಚೆನ್ನಾಗಿ ಆಲೋಚನೆ ಮಾಡಿ ಮೂಲಿಕೆಯನ್ನು ಜಗಿದು ತನಗೆ ಕಾಡುಕೋಣದ ರೂಪವನ್ನು ತಂದುಕೊಂಡನು. ಆ ರೂಪದಿಂದ, ಸಮಯ ಸಾಧಿಸಿ ವೀರಣ್ಣನನ್ನು ಕೊಂಬುಗಳಿಂದ ತಿವಿದು, ಕಾಲುಗಳಿಂದ ಮೆಟ್ಟಿ ಕೊಲ್ಲಬೇಕೆಂಬುದು ಅವನ ಆಲೋಚನೆ.

ಸೂರಣ್ಣನು ಹೀಗೆ ಕಾಡುಕೋಣದ ರೂಪದಲ್ಲಿ ವೀರಣ್ಣನನ್ನು ಹುಡುಕಿಕೊಂಡಿರುವಾಗ, ಒಂದು ಹೆಬ್ಬುಲಿ ಆ ಕೋಣವನ್ನು ನೋಡಿ ಭಯಂಕರವಾಗಿ ಗಾಂಡ್ರಿಸಿ ತನ್ನ ಹಸಿವೆಯನ್ನು ಪ್ರಕಟಿಸಿತು. ಕೋಣ ಸೂರಣ್ಣ ಹೆದರಿ ಓಟಕಿತ್ತನು. ಹುಲಿ ಅವನನ್ನು ಬೆಂಬತ್ತಿತು. ಇನ್ನು ಉಪಯೋಗವಿಲ್ಲವೆಂದು ಸೂರಣ್ಣ ಮರದ ಮೇಲೇರಿ ಪ್ರಾಣ ಉಳಿಸಿಕೊಂಡನು.

ತನ್ನ ಕೋರಿಕೆಯನ್ನು ಎರಡನೆಯ ಸಾರಿಯೂ ನೆರವೇರಿಸಿಕೊಳ್ಳಲಾಗದೆ, ಎರಡನೆಯ ಸಾರಿಯೂ ಮೂಲಿಕೆ ವ್ಯರ್ಥವಾಯಿತು. ಮೂರನೇ ಸಾರಿ ಸೂರಣ್ಣನು ಮೂರನೆಯ ಮೂಲಿಕೆಯಿಂದ ಹುಲಿಯ ರೂಪವನ್ನು ಬರಿಸಿಕೊಂಡು, ಹುಲ್ಲು ಪೊದೆಗಳ ಮರೆಯಲ್ಲಿ ವೀರಣ್ಣನನ್ನು ಹೊಂಚಿಕೊಂಡಿದ್ದನು. ಸ್ವಲ್ಪ ಹೊತ್ತಿನ ಮೇಲೆ ವೀರಣ್ಣನು ಕೊಡಲಿಯನ್ನು ಹೆಗಲಲ್ಲಿಟ್ಟುಕೊಂಡು, ಕಟ್ಟಿಗೆಗೆ ತಕ್ಕ ಮರವನ್ನು ಹುಡುಕುತ್ತಾ ಆ ಕಡೆಗೆ ಬಂದನು.

ಹುಲಿ ಸೂರಣ್ಣ ಭಯಂಕರವಾಗಿ ಗರ್ಜಿಸುತ್ತಾ ಈಟಿಗೆ ಹಾರಿದನು. ಆಕಸ್ಮಾತ್ತಾಗಿ ಹುಲಿಯ ಗರ್ಜನೆಯ ಶಬ್ದ ಕೇಳಿ ವೀರಣ್ಣನು ಪಕ್ಕಕ್ಕೆ ಧುಮುಕುವಾಗ ಕೊಡಲಿ ಹೆಗಲಿನಿಂದ ಜಾರಿ ಬಿದ್ದು ಹೋಯಿತು. ಇನ್ನು ತನಗೆ ಸಾವು ತಪ್ಪದೆಂದು ವೀರಣ್ಣನು ಎಷ್ಟು ಶಕ್ತಿಯಿದೆಯೋ ಅಷ್ಟು ವೇಗವಾಗಿ ಓಡತೊಡಗಿದನು. ಬಹುದೊಡ್ಡ ಕೆಸರು ರಾಡಿ ತುಂಬಿದ ಹಳ್ಳದ ತಿಟ್ಟಿನಲ್ಲೇ ಅವನು ಓಡುತ್ತಿದ್ದನು. ಅವನನ್ನು ಬಾಯಿಯಿಂದ ಕಚ್ಚಿಕೊಳ್ಳುವ ಆತುರದಲ್ಲಿ ಸೂರಣ್ಣ ಹುಲಿ ಕುಪ್ಪಳಿಸಿ ಹಾರುತ್ತ ಕಾಲುಜಾರಿ ಕೆಸರಿನ ಹಳ್ಳಕೆ ಬಿತ್ತು. ಆದರಿಂದ ಹೊರಗೆ ಬರಬೇಕೆಂಬ ಪ್ರಯತ್ನದಲ್ಲಿ ಅತ್ತಿತ್ತ ಹೊಡೆದುಕೊಳ್ಳುತ್ತಿರಲು ಇನ್ನಿಷ್ಟು ಆಳಕ್ಕೆ ಕೆಸರುರಾಡಿಯೊಳಗೆ ಇಳಿಯತೊಡಗಿತು ಆ ಹುಲಿ. ಸಾಯುವ ಭೀತಿಯಿಂದ ದಿಕ್ಕು ತೋರದೆ ಸೂರಣ್ಣನು, ಥಕ್ಕನೆ ಮನುಷ್ಯ ರೂಪ ತಂದುಕೊಂಡು ಎದೆಯವರೆಗೆ ಕೆಸರಿನೊಳಗೆ ಹೋಗುತ್ತಿರಲು ಕೈಗಳನ್ನೆತ್ತಿ ಆಡಿಸುತ್ತಾ, "ವೀರಣ್ಣಾ ! ಸಾಯುತ್ತೀನೋಯ್ ! ರಕ್ಷಿಸೋ " ಎಂದು ಕೂಗಿದನು.

ಆ ಕೂಗು ಕೇಳಿ ವೀರಣ್ಣನು ಅಲ್ಲಿಗೆ ಬಂದು, ತನ್ನ ವಸ್ತ್ರದ ಕೊನೆ ಸೂರಣ್ಣನ ಕೈಗೆ ಎಟುಕುವಂತೆ ಬಿಸುಟು ಅವನನ್ನು ಮೇಲಕ್ಕೆ ಎಳೆಯುತ್ತ,

"ಇದೇನು ಸೂರಣ್ಣಾ ! ಹುಲಿ ಓಡಿಸಿಕೊಂಡು ಬಂದು ಕೆಸರು ಹೊಂಡಕ್ಕೆ ಬಿದ್ದ ಹಾಗೆ ತೋರಿತು. ಈಗ ಅದೆಲ್ಲಿ ? ನೀನು ಹೇಗೆ ಕೆರೆಗೆ ಬಿದ್ದೆ ?" ಎಂದನು.

ಅಂತೂ ತೀರ ಸೇರಿದ ಮೇಲೆ ಕೆಸರಿನ ಶರೀರದ ಸೂರಣ್ಣನು ವೀರಣ್ಣನ ಕಾಲಿಗೆ ಬಿದ್ದು ಕ್ಷಮಿಸುವಂತೆ ಕೇಳಿಕೊಂಡು, ಮುಚ್ಚುಮರೆಯಿಲ್ಲದೆ ತನ್ನಲ್ಲಿ ಅಸೂಯೆಯಿಂದಾದ ದುಷ್ಟ ಸಂಕಲ್ಪವನ್ನೆಲ್ಲಾ ಹೇಳಿದನು.

ವೀರಣ್ಣನು ಅವನನ್ನು ಸಮಾಧಾನಪಡಿಸುತ್ತಾ, "ಹೋಗಲಿ ಬಿಡಯ್ಯಾ, ಅಸೂಯೆ ಮನುಷ್ಯನನ್ನು ಕ್ರೂರ ಮೃಗವಾಗಿ ಮಾಡುತ್ತದೆಂದು ನಿನ್ನಿಂದ ನನಗೂ ಗೊತ್ತಾಯಿತು. ಇದನ್ನು ನಾವಿಬ್ಬರೂ ಮರೆತುಬಿಡೋಣ. ಸ್ನಾನಮಾಡು. ಪೂರ್ತಿ ಪರಿಶುದ್ಧನಾಗುವಿ " ಎಂದು ಅವನ ಕೈ ಹಿಡಿದು ಅತ್ತ ಕೆರೆಯಕಡೆ ಕರೆದೊಯ್ದನು.





# ಉಚ್ಚನೀಚರು

ಬ್ರಹ್ಮದತ್ತನು ಕಾಶೀರಾಜ್ಯವನ್ನು ಪಾಲಿಸಿಕೊಂಡಿದ್ದ ಕಾಲದಲ್ಲಿ ಬೋಧಿಸತ್ವನು ಒಂದುಸಾರಿ ಸಿಂಹವಾಗಿ ಅವತರಿಸಿದನು. ಆ ಸಿಂಹವು ಒಂದು ಬೆಟ್ಟದಗುಹೆಯಲ್ಲಿ ತನ್ನ ಹೆಂಡತಿಯೊಂದಿಗೆ ವಾಸಮಾಡಿಕೊಂಡಿದ್ದಿತು.

ಒಂದು ದಿನ ಆ ಸಿಂಹವು ಬೇಟೆಯನ್ನು ಹುಡುಕುತ್ತಾ, ಎಲ್ಲೆಲ್ಲೋ ಸುತ್ತಿ, ಒಂದು ಗುಡ್ಡದ ಮೇಲೆ ನಿಂತು ಕೆಳಗೆ ನೋಡಿತು. ಗುಡ್ಡದ ಕೆಳಗೆ ಒಂದು ಕೊಳದ ಪಕ್ಕದಲ್ಲಿ ಹಸಿರಾದ ಮೈದಾನ ಸ್ಥಳವೂ, ಅಲ್ಲಿ ಮೇಯುತ್ತ, ಮೊಲಗಳೊಂದಿಗೆ ಆಡಿಕೊಂಡಿರುವ ಜಿಂಕೆಗಳೂ ಕಾಣಿಸಿದುವು. ಅವುಗಳನ್ನು ನೋಡಿ ಹಸಿದ ಸಿಂಹವು ದೊಡ್ಡದೊಂದು ರಂಕೆ ಮೊಳಗಿಸಿ, ಗುಡ್ಡವಿಳಿದು ಅವುಗಳ ಕಡೆಗೆ ಹಾರಿತು. ಹಾಗೆ ಹಾರಿಹಾರಿ ಹೋಗುವಾಗ, ಕೊಳದ ಪಕ್ಕದಲ್ಲಿರುವ ಕೆಸರಿನಲ್ಲಿ ಅದು . ಸಿಕ್ಕಿಕೊಂಡಿತು. ಅಷ್ಟರೊಳಗೆ ಸಿಂಹವನ್ನು ನೋಡಿ ಜಿಂಕೆಗಳೂ, ಮೊಲಗಳೂ ಓಡಿ ಹೋದುವು.

ಕೆಸರಿನಿಂದ ಪಾರಾಗಲು ಆ ಸಿಂಹವು ಸ್ವಲ್ಪ ಪ್ರಯತ್ನ ಮಾಡುವಾಗ ಇನ್ನಿಷ್ಟು ಅಡಿಗೇ ಹೋಗುವುದನ್ನು ನೋಡಿ ಅಲುಗಾಡದೆ ಸುಮ್ಮನಾಯಿತು. ತನ್ನನ್ನು ರಕ್ಷಿಸ ತಕ್ಕವರು ಯಾರಾದರೂ ಬರುವರೋ ಎಂದು ನಿರೀಕ್ಷಿಸುತ್ತಿತ್ತು.

ಹೆಚ್ಚು ಹೆಚ್ಚಾಗಿ ಸಂಕಟಪಡಿಸುವ ಹಸಿವೆಯಿಂದ ಆ ಸಿಂಹವು ಏನೂ ಮಾಡಲಾಗದೆ ಏಳು ದಿನಗಳನ್ನು ಕಳೆಯಿತು. ಆಮೇಲೆ ಪಕ್ಕದಲ್ಲಿರುವ ಕೊಳದಲ್ಲಿ ನೀರು ಕುಡಿಯಲು ಒಂದು ನರಿ ಅಲ್ಲಿಗೆ ಬಂದು ಸಿಂಹವನ್ನು ನೋಡಿ ಹೆದರಿ ದೂರ ನಿಂತಿತು.

ಸಿಂಹವು ನರಿಯನ್ನು ನೋಡಿ, "ಅಪ್ಪಾ. ನರಿತಮ್ಮಾ, ಏಳು ದಿನಗಳಿಂದ ನಾನು ಈ ಕೆಸರಿನಲ್ಲಿ ಸಿಕ್ಕಿಕೊಂಡು ಸಾಯುವ ಸ್ಥಿತಿಗೆ ಬಂದಿದ್ದೇನೆ. ಹೇಗಾದರೂ ನನ್ನನ್ನು ಕಾಪಾಡಿ ಪುಣ್ಯಕಟ್ಟಿಕೊ" ಎಂದು ಪ್ರಾರ್ಥಿಸಿಕೊಂಡಿತು.

'ಅಯ್ಯಯ್ಯೊ! ಮೊದಲೇ ಹಸಿವಿನಿಂದಿರುವವನು. ನನ್ನನ್ನು ಕೊಂದು ಬಿಡುವಿಯೇನೊ? ನಿನ್ನನ್ನು ಹೇಗೆ ನಂಬಲಾದೀತು?" ಎಂದಿತು ನರಿ.

"ಪ್ರಾಣಭಿಕ್ಷೆ ನೀಡಿದವರನ್ನು ಕೊಲ್ಲುವೆನೆ? ನನ್ನನ್ನು ಈ ಕೆಸರಿನಿಂದ ಕಾಪಾಡಿದೆಯಾದರೆ, ಬದುಕಿರುವ ವರೆಗೂ ನಿನಗೆ ಕೃತಜ್ಞನಾಗಿರುತ್ತೇನೆ. ನನ್ನ ಮಾತು ನಂಬು" ಎಂದು ಹೇಳಿತು ಸಿಂಹ.

ನರಿ ಸಿಂಹದ ಮಾತನ್ನು ನಂಬಿ ಎರಡು ಮರದ ತುಂಡುಗಳನ್ನು ತಂದು, ತುದಿಗಳನ್ನು ಮರದ ಬೇರಿನೆಡೆಗೆ ತೂರಿಸಿ ಕೆಸರಿನ ಮೇಲೆ ಇಳಿಜಾರಾಗಿ ಹಾಕಿತು. ಸಿಂಹವು ಆ ಮರದ ತುಂಡುಗಳ ಮೇಲೆ ಕಾಲುಗಳನ್ನು ಊರಿ, ಕೆಸರಿನೊಳಗಿನಿಂದ ತೀರಕ್ಕೆ ಬಂದು ಮೃತ್ಯುವಿನ ದವಡೆಯಿಂದ ಪಾರಾಯಿತು.

ತರುವಾಯ ಅವೆರಡೂ ಕೂಡಿ ಅರಣ್ಯದಲ್ಲಿ ಬೇಟೆಗೆ ಹೊರಟವು. ಸಿಂಹವು ಒಂದು ಮೃಗವನ್ನು ಕೊಂದಿತು. ಆಮೇಲೆ ನರಿಯೂ ಸಿಂಹವೂ ಸರಿಸಮ ಹಂಚಿಕೊಂಡು ತಿಂದುವು.

"ಇಂದಿನಿಂದ ನಾವು ಸಹೋದರರು. ಇನ್ನು ಮೇಲೆ ನೀನೊಂದು ಕಡೆ ನಾನೊಂದು ಕಡೆ ಏಕೆ ಇರಬೇಕು ? ನಿನ್ನ ಕುಟುಂಬವನ್ನು ನನ್ನ ಗುಹೆಗೇ ತೆಗೆದುಕೊಂಡು ಬಾ, ಎಲ್ಲರೂ ಒಟ್ಟಿಗೆ ಕೂಡಿ ಕೊಂಡೇ ಜೀವಿಸೋಣ" ಎಂದಿತು ಸಿಂಹ. ನರಿ ಅದನ್ನು ಒಪ್ಪಿಕೊಂಡು, ಹೆಂಡತಿಯೊಂದಿಗೆ ಸಿಂಹದ ಗುಹೆಗೆ ಹೋಗಿ ಇರತೊಡಗಿತು.

ಸಿಂಹದ ಗುಹೆಯಲ್ಲಿ ತಾನು ಕೂಡಾ ಸಂಸಾರ ನಡೆಸಿದರೆ ದೊಡ್ಡ ಗೌರವವಿರುತ್ತದೆಂದು ನರಿ ಈ ಏರ್ಪಾಡಿಗೆ ಒಪ್ಪಿತೇ ಹೊರತು ತನ್ನ ಕಡೆಯವರಿಗೆಲ್ಲ ತಾನು ದೂರವಾಗುವೆನೆಂಬ ಕೊರತೆಯೊಂದು ಅದರ ಮನಸ್ಸಿನಲ್ಲಿ ಇದ್ದೇ ಇತ್ತು. ಆದರಿಂದ ಕೆಲವು ಕಷ್ಟ ನಷ್ಟಗಳೂ ಇದ್ದುವು. ಸಿಂಹವು ಕೂಡಾ, ನರಿ ಮಾಡಿದ ತ್ಯಾಗವನ್ನು ಅರ್ಥ ಮಾಡಿಕೊಂಡು, ತಾನು ಹೇಳಿದ ಮಾತಿನಂತೆ ಪ್ರತಿ ಸಣ್ಣ ವಿಷಯದಲ್ಲಿಯೂ ತನಗೆ ಸರಿ ಸಮನಾಗಿ ನೋಡಿಕೊಳ್ಳುತ್ತ, ನರಿಯ ಮನಸ್ಸಿಗೆ ನೋವಾಗದಂತೆ ಪ್ರವರ್ತಿಸುತ್ತಿದ್ದಿತು.

ಸಿಂಹವು ನರಿಯನ್ನು ಎಷ್ಟೇ ಪ್ರೀತಿಯಿಂದ ನೋಡಿಕೊಂಡರೂ ಸಿಂಹದ ಹೆಂಡತಿ ನರಿಯ ಹೆಂಡತಿಯನ್ನು ಕಡಿಮೆಯ ಕಣ್ಣಿನಿಂದಲೇ ನೋಡುತ್ತಿತ್ತು. ನರಿಯ ಹೆಂಡತಿ ಕೂಡಾ ಆ ಕಡಿಮೆ ತನವನ್ನು ಅನುಮೋದಿಸಿಕೊಂಡು ಬಂದುದರಿಂದ ಆ ಎರಡು ಕುಟುಂಬಗಳ ನಡುವೆ ಯಾವ ತಕರಾರುಗಳೂ ಏಳಲಿಲ್ಲ, ಹೀಗಿರುವಾಗ, ಕಾಲಕ್ರಮದಲ್ಲಿ



ಸಿಂಹಕ್ಕೂ ನರಿಗೂ ಸಹ ಮಕ್ಕಳು ಹುಟ್ಟಿ, ಅವು ಸರಿಸಮವಾಗಿ ಆಡಿಕೊಂಡಿರುವಾಗ ಸಿಂಹದ ಹೆಂಡತಿಗೆ ಸಿಟ್ಟು ಬರತೊಡಗಿತು. ತಾವು ಕಡಿಮೆ ತರಗತಿಯವರೆಂದೂ, ಸಿಂಹದ ಮರಿಗಳು ಹೆಚ್ಚಿನ ತರಗತಿಯುವೆಂದೂ ತಿಳಿಯದಿರುವ ನರಿ ಮರಿಗಳು ಸಿಂಹದ ಮರಿಗಳೊಂದಿಗೆ ಕೆಳಗೂ ಮೇಲೂ ಬಿದ್ದು ಹೊರಳಿ ಆಡಿಕೊಳ್ಳುತ್ತಿದ್ದುವು. ಇದು ಸಿಂಹಿಣಿಗೆ ನೋಡಲಾಗುತ್ತಿರಲಿಲ್ಲ.

ಉಚ್ಚ ನೀಚಗಳ ಸಂಗತಿ ಗೊತ್ತಿಲ್ಲದ ಸಿಂಹದ ಮರಿಗಳು ಕೂಡಾ ನರಿಯ ಮರಿಗಳೊಂದಿಗೆ ಸರಿಸಮವಾಗಿಯೇ ಆಡುತ್ತಿದ್ದವು.

ಇದನ್ನು ನೋಡಿ ಸಹಿಸದೆ ಸಿಂಹದ ಹೆಂಡತಿ ತನ್ನ ಮಕ್ಕಳೊಂದಿಗೆ ಮರೆಯಲ್ಲಿ, "ನಾವೂ ನೀವೂ ದೊಡ್ಡ ಜಾತಿಯಲ್ಲಿ ಹುಟ್ಟಿದವರು. ನೀವು ಆ ಕೀಳು ಜಾತಿಯ ನರಿಯ ಮಕ್ಕಳೊಂದಿಗೆ ಹೀಗೆ ಸಲಿಗೆಯಿಂದ ಆಡಕೂಡದು. ಚೆಂದಾಗಿಲ್ಲ. ಅವುಗಳನ್ನು ದೂರ ದೂರ ಇರಿಸಿರಿ" ಎಂದು ಹೇಳಿತು.

ಸಿಂಹದ ಮರಿಗಳಿಗೆ ತಾಯಿಯ ಉಪದೇಶ ಸ್ವಲ್ಪ ಸ್ವಲ್ಪವಾಗಿ ತಲೆಗೇರ ತೊಡಗಿತು. ಅವು ನರಿಯ ಮರಿಗಳನ್ನು ಹೀನ ದೃಷ್ಟಿಯಿಂದ ನೋಡುವುದೂ, ಅವುಗಳು ಆಟಕ್ಕೆ ಕರೆದಾಗ, ಬಯ್ಯುವುದೂ, ಅಪ್ಪಿ ತಪ್ಪಿ ಆಡಿದರೆ ಅನ್ಯಾಯಗಳನ್ನು ಮಾಡಿ ಅವುಗಳನ್ನು ಅಳಿಸುವುದೂ, "ನಾವು ದೊಡ್ಡವರು. ನಿಮ್ಮನ್ನೆಲ್ಲ ನಾವು ಪೋಷಿಸುವವರು, ನಮಗೆ ನೀವು ಎದುರಾಡ ಬಾರದು, ಅಡಗಿರಬೇಕು. ನೀವು ಕಡಿಮೆಯವ ರಾದ್ದರಿಂದ, ನಾವು ಬೈದರೂ ಮಾತಾಡದೆ ಬಿದ್ದಿರ ಬೇಕಾದ್ದೇ" ಎಂದು ಹೇಳಲಿಕ್ಕೂ ತೊಡಗಿದುವು.

ಹೀಗೆ ದಿನಾ ಕೊರಗಿಕೊಂಡಿರುವುದು ಹೆಣ್ಣು ನರಿಗೆ ಸಹಿಸಿ ಸಾಕಾಗಿ ಗಂಡನ ಮುಂದೆ ದುಃಖ ತೋಡಿಕೊಂಡಿತು. ಒಂದು ದಿನ ನರಿ ಸಿಂಹದೊಂದಿಗೆ ಬೇಟೆಗೆ ಹೋದಾಗ, "ಅಯ್ಯಾ, ಎಷ್ಟಾದರೂ ನಿಮ್ಮದು ರಾಜ ಜಾತಿ. ನಾವು ಸಾಮಾನ್ಯದವರು. ಆದುದರಿಂದ ನಾವು ಒಟ್ಟೊಟ್ಟು ಇರುವುದು ಅಷ್ಟು ಒಳ್ಳೆಯದಲ್ಲವೆಂದೇ ಕಾಣುತ್ತದೆ. ನಾನು ಕುಟುಂಬ



ದೊಂದಿಗೆ ಹೋಗಿ ನಮ್ಮವರ ನಡುವೆಯೇ ಬದುಕುತ್ತೇನೆ. ಅನುಜ್ಞೆ ಕೊಡಿ" ಎಂದಿತು.

ಆಕಸ್ಮಿಕವಾಗಿ ತನ್ನ ಮಿತ್ರನಲ್ಲಿ ಉಂಟಾದ ಈ ಬದಲಾವಣೆಯಿಂದ ಸಿಂಹವು ಆಶ್ಚರ್ಯಪಟ್ಟಿತು. ಹೀಗೆ ಹೇಳಲು ಕಾರಣವೇನೆಂದು ಕೇಳಲು, ನರಿ ನಡೆದುದನ್ನೆಲ್ಲಾ ತಿಳಿಸಿತು.

ಆ ದಿನ ರಾತ್ರಿ ಗುಹೆಗೆ ಬಂದ ಕೂಡಲೇ ಸಿಂಹವು ತನ್ನ ಹೆಂಡತಿಯೊಂದಿಗೆ, "ನೀನು ನರಿಯ ಮಕ್ಕಳನ್ನು ನೋಡಿ ಅಸಹ್ಯಪಡುವೆಯಂತೆ, ಹೌದೇ ?" ಎಂದು ಕೇಳಿತು.

"ಹೌದು. ಅಸಹ್ಯಪಡದೆ ಮತ್ತೇನು? ಆ ಕಡಿಮೆ ಜಾತಿ ಮಕ್ಕಳು ನಮ್ಮ ಮಕ್ಕಳೊಂದಿಗೆ ಸರಿಸಮನಾಗಿ ಆಡಿಕೊಳ್ಳುವುದು ಏನೇನೂ ಚೆನ್ನಾಗಿಲ್ಲ. ನಿಮಗೆ ಆ ತಂತ್ರಗಾರ ನರಿ ಏನು ಮದ್ದು ಹಾಕಿ ವಶಪಡಿಸಿಕೊಂಡಿತೋ ನಾನರಿಯೆ. ನಮ್ಮ ಮಕ್ಕಳು ಹಾಳಾಗುವುದನ್ನು ಮಾತ್ರ ನಾನು ಸಹಿಸಲಾರೆ" ಎಂದಿತು ಸಿಂಹದ ಹೆಂಡತಿ.

"ಅದುವೋ ಸಂಗತಿ ? ನರಿ ನನಗೆ ಎಂತಹ ಮದ್ದು ಹಾಕಿತೆಂಬುದನ್ನು ಈ ವರೆಗೂ ನಾನು ನಿನಗೆ ಹೇಳಲಿಲ್ಲ. ಅದನ್ನು ಹೇಳುವುದು ನನ್ನ ಸಿಂಹತನಕ್ಕೆ ಅವಮಾನವೆಂದು ಸುಮ್ಮನೆ ನನ್ನ ಸ್ನೇಹಿತನ ಮನೆಯಲ್ಲಿದ್ದೆ ಅಂತ ಹೇಳಿದ್ದೆ ಹೌದಾ ? ಸತ್ಯ ಸಂಗತಿ ಹೇಳುತ್ತೇನೆ. ನಾನು ಒಂದುಸಾರಿ ಏಳೆಂಟು ದಿನ ಮನೆಗೆ ಬರಲಿಲ್ಲವೆಂಬುದು ನೆನಪಿದೆಯೆ ? ಹಸಿವಿನಿಂದ ಕಣ್ಣು ತಿಳಿಯದೆ ಜಿಂಕೆಯನ್ನು ಹಿಡಿಯಲು ಹಾರುವಾಗ ಕೆಸರು ಗುಂಡಿಗೆ ಬಿದ್ದೆ. ಏಳು ದಿನ ಅಲುಗಾಡದೆ ಹಸಿವೆಯಿಂದ ಸ್ವಲ್ಪ ಸ್ವಲ್ಪವಾಗಿ ಸಾಯುತ್ತ ಇರುವಾಗ, ಈ ನರಿ ಅಕಸ್ಮಾತ್ತಾಗಿ ಬಂತು. ನನ್ನನ್ನು ನಂಬಿ ಉಪಾಯದಿಂದ ಮೇಲೆ ಸೇರಿಸಿತು. ಆ ದಿನ ನರಿ ಬಂದು ನನ್ನನ್ನು ಕಾಪಾಡದೆ ಹೋಗಿದ್ದರೆ ನಾನೂ ಇರುತ್ತಿದ್ದಿಲ್ಲ. ಈ ಮಕ್ಕಳೂ ಇರುತ್ತಿದ್ದಿಲ್ಲ. ಆಗ ಹಸಿವೆಯಿಂದ ಕಂಗಾಲಾಗಿದ್ದ ನಾನು ಈ ನರಿಯನ್ನು ನುಂಗುವುದು ಸುಲಭವಿತ್ತು. ಅದು ನನ್ನ ಮಾತನ್ನು ನಂಬಿ, ನನ್ನನ್ನು ಕಾಪಾಡಿತ್ತು. ಪ್ರಾಣಭಿಕ್ಷೆ ನೀಡಿದವರ ಹತ್ತಿರ ಉಚ್ಚ ನೀಚ ನೋಡುವುದು ಮಹಾ ಅಪಚಾರ. ಅಂಥವರನ್ನು ಅವಮಾನಿಸುವುದು, ನಮ್ಮ ರಕ್ತಸಂಬಂಧಿಗಳನ್ನು ಅವಮಾನಿಸಿದ ಹಾಗೆಯೇ" ಎಂದಿತು ಸಿಂಹ.

ಇದನ್ನು ಕೇಳಿ ಸಿಂಹಿಣಿ ತನ್ನ ಕೃತ್ಯಕ್ಕೆ ನಾಚಿಕೊಂಡು, ನರಿಯ ಹೆಂಡತಿಯ ಹತ್ತಿರ ಹೋಗಿ ಕ್ಷಮೆ ಕೇಳಿಕೊಂಡಿತು.

ಆಮೇಲೆ ಏಳು ತಲೆಮಾರಿನ ವರೆಗೂ ಆ ಸಿಂಹದ ಸಂತತಿಯೂ ನರಿಯ ಸಂತತಿಯೂ, ಅದೇ ಗುಹೆಯಲ್ಲಿ ಸಖ್ಯತೆಯಿಂದ ಕೂಡಿ ಕಲೆತು ಸುಖವಾಗಿದ್ದುವು.





# ಗೌರವ ೧

ಒಂದು ಕಾಲದಲ್ಲಿ ಚಂಡಪ್ರಚಂಡನೆಂಬ ದೊಡ್ಡ ವಿದ್ವಾಂಸನಿದ್ದನು. ಅವನು ದೇಶ ದೇಶಗಳನ್ನು ತಿರುಗಾಡುತ್ತ, ಎಷ್ಟೋ ಸಂಗೀತ ಕಚೇರಿ ನಡೆಸಿ ಅನೇಕಾನೇಕ ಸನ್ಮಾನಗಳನ್ನು ಹೊಂದಿ ಧರ್ಮಾವರವೆಂಬ ಊರಿಗೆ ಬಂದನು. ತುಂಬಾ ಐಶ್ವರ್ಯವಂತನಾದ ಆ ಸಂಗೀತ ವಿದ್ವಾಂಸನು ತಮ್ಮ ಊರಿಗೆ ಬಂದುದನ್ನು ನೋಡಿ, ಆ ಊರಿನ ಹವೆಯನ್ನು ಅನುಭವಿಸಲು ಕೆಲವು ದಿನ ಅಲ್ಲಿಯೇ ಇರುವನೆಂದು ತಿಳಿದು, ಊರಿನವರಿಗೆಲ್ಲ ಬಹಳ ಸಂತೋಷವಾಯಿತು.

ಧರ್ಮಾವರದ ಜಮೀನುದಾರರು ಬಹಳ ಮರ್ಯಾದೆಯವರೆಂದು ಹೆಸರು ಪಡೆದವರು. ಚಂಡಪ್ರಚಂಡನಂತಹ ವಿದ್ವಾಂಸನು ತನ್ನ ಊರಿಗೆ ಬಂದಿರುವುದನ್ನು ತಿಳಿದು ಜಮೀನುದಾರರು ವಿದ್ವಾಂಸನನ್ನು, ಗೌರವಿಸಿ ಸತ್ಕಾರ ಮಾಡಿ, ಬೇರೆ ಮನೆಗೆ ಹೋಗುವವರೆಗೆ ತನ್ನ ಮನೆಯಲ್ಲಿಯೇ ಇರಬಹುದೆಂದು ಹೇಳಿದರು.

ಜಮೀನುದಾರರಿಗೆ ನಾಲ್ವರು ಮಕ್ಕಳಿದ್ದರು. ಸಂಗೀತದ ಮೇಲೆ ಅವರಿಗೆ ತುಂಬಾ ಆಸಕ್ತಿಯಿದ್ದಿತು. ಆ ಮಕ್ಕಳು ಮಾತ್ರವಲ್ಲದೆ, ಅವರ ಬಂಧುಗಳ ಮಕ್ಕಳೂ ಆರು ಮಂದಿ ಇದ್ದರು. ಅವರಿಗೂ ಸಂಗೀತದ ಮೇಲೆ ಆಸಕ್ತಿಯಿದ್ದುದರಿಂದ, ಜಮೀನುದಾರರು ದೂರದಲ್ಲಿದ್ದ ವಿದ್ವಾಂಸನೊಬ್ಬನನ್ನು ಆ ಮಕ್ಕಳಿಗೆ ಸಂಗೀತದ ಗುರುವಾಗಿ ನಿಯಮಿಸಿದ್ದರು.

ಆ ಗುರು ಶಿಷ್ಯರ ನಡುವೆ ನಡೆಯುವ ಸಂಗೀತ ಸಾಧನೆಗಳನ್ನು ಒಂದೆರಡು ಸಾರಿ ಚಂಡಪ್ರಚಂಡನು ಕೇಳಿ, ಜಮೀನುದಾರರೊಂದಿಗೆ, "ಇವನು ನಿಮ್ಮ ಮಕ್ಕಳನ್ನು ಸಂಗೀತ ಕಲಿಸುವ ನೆಪದಲ್ಲಿ ಯಾವುದೋ ತಪ್ಪು ದಾರಿ ಹಿಡಿಸುತ್ತಿದ್ದಾನೆ" ಎಂದನು.

ಜಮೀನುದಾರರು ಏನೂ ಹೇಳದೆ ಸುಮ್ಮನೆ ಮುಗುಳುನಕ್ಕರು ಮಾತ್ರ. ಸಂಗೀತದ ಗುರುವನ್ನು ಬದಲಾಯಿಸುವ ಯೋಚನೆ ಮಾಡಲಿಲ್ಲ. ಕೆಲವು ದಿನಗಳ ಮೇಲೆ ಚಂಡಪ್ರಚಂಡನು ಸಮೀಪದಲ್ಲಿರುವ ಒಂದು ಒಳ್ಳೆಯ ಮನೆಯನ್ನು ನೋಡಿಕೊಂಡು, ಅಲ್ಲಿಗೆ ಹೋಗಿ ವಾಸ ಮಾಡಲು ತೊಡಗಿದನು. ಮತ್ತೆ ಕೆಲವು ದಿನಗಳ ಮೇಲೆ ಜಮೀನುದಾರರಲ್ಲಿಗೆ ಬರುವ ವಿದ್ವಾಂಸನು ಏಕೋ ನಿಂತುಹೋದನು.

ಧರ್ಮಾವರದಲ್ಲಿ ಸಂಗೀತ ಕಲಿಯುವ ಹುಡುಗ ಹುಡುಗ ಹುಡುಗಿಯರಿದ್ದಾರೆಯೇ ಹೊರತು, ಸಂಗೀತ

ಜಿ. ರಾಮಲಕ್ಷ್ಮಿ



ವನ್ನು ಕೇಳಿ ರಸಿಸುವ ದೊಡ್ಡವರಾರೂ ಇರಲಿಲ್ಲ. ತಾನೊಬ್ಬನೇ ಸಂಗೀತ ಸಾಧನೆ ಮಾಡಿಕೊಳ್ಳುವುದರಲ್ಲಿ ಚಂಡಪ್ರಚಂಡನಿಗೆ ಬೇಸರ ಬಂದಿತು. ಜಮೀನುದಾರರು ತಮ್ಮ ಮಕ್ಕಳಿಗೆ ಸಂಗೀತ ಹೇಳಿ ಕೊಡುವಂತೆ ತನ್ನನ್ನು ಕೇಳಿದರೆ ಒಳ್ಳೆಯದಿತ್ತು ಎನಿಸಿತು ಚಂಡಪ್ರಚಂಡನಿಗೆ. ಆದರೆ ಜಮೀನುದಾರರು ಆತನ ಹತ್ತಿರ ಆ ಮಾತು ಎತ್ತಲೇ ಇಲ್ಲ.

ಒಂದು ದಿನ ಚಂಡಪ್ರಚಂಡನು ಜಮೀನುದಾರರೊಂದಿಗೆ "ನಿಮ್ಮ ಊರಿನಲ್ಲಿ ಸಂಗೀತ ಕಲಿಯಬೇಕೆಂದಿರುವವರಿಗೆ ನಾನು ಉಚಿತವಾಗಿ ಸಂಗೀತ ಕಲಿಸಿಕೊಡಬೇಕೆಂದು ಮಾಡಿದ್ದೇನೆ" ಎಂದನು.

ಮರುದಿನದಿಂದಲೇ ಸುಮಾರು ನೂರು ಮಂದಿ ಶಿಷ್ಯರು ಸಂಗೀತ ಕಲಿಯುವ ಆತುರತೆಯಲ್ಲಿ ಬಂದರು. ನಾಲ್ಕು ದಿನಗಳವರೆಗೆ ಚಂಡಪ್ರಚಂಡನು ಅವರುಗಳೊಂದಿಗೆ ಬಹಳ ಶ್ರಮಪಟ್ಟು ಸಾಕು ಸಾಕಾದನು. ಜಮೀನುದಾರರ ಮನೆಯ ಮಕ್ಕಳ ಹೊರತು, ಉಳಿದವರಿಗೆ ಮೊದಲನೇ ದಿನ ಹೇಳಿದ ಪಾಠಗಳು ಪೂರ್ತಿ ಮರೆತಿರುತ್ತಿದ್ದುವು. ಒಂದು ದಿನ ಬಂದ ಹುಡುಗ ಮರುದಿನ ಬರಲೇ ಇಲ್ಲ. ಬದಲಿಗೆ ಇನ್ನೊಬ್ಬನು ಬರುತ್ತಿದ್ದನು. ಈ ಶಿಷ್ಯರ ಉಪದ್ರವನ್ನು ಜಮೀನುದಾರರೊಂದಿಗೆ, ಹೇಳಿ ಆಲೋಚನೆ ಕೇಳಿದನು ಚಂಡಪ್ರಚಂಡ.

"ಸುಮ್ಮನೆ ಸಂಗೀತ ಕಲಿಯುವುದೆಂದರೆ ಅಡ್ಡಾದಿಡ್ಡಿನವರೆಲ್ಲಾ ಬರುತ್ತಾರೆ. ಏನೋ ಸ್ವಲ್ಪ ಸಂಬಳ ಕೊಡಬೇಕೆಂದು ಹೇಳಿಬಿಡಿರಿ. ಸರಿಯಾಗಿ ಬಿಡುತ್ತದೆ" ಎಂದರು ಜಮೀನುದಾರರು.

ಆ ವಿಧವಾಗಿ ಚಂಡಪ್ರಚಂಡನು, ತಿಂಗಳಿಗೆ ಒಂದು ವರಹ ಸಂಬಳ ಕೊಡುವವರನ್ನೇ ಶಿಷ್ಯರನ್ನಾಗಿ ತೆಗೆದುಕೊಳ್ಳಲು ತೊಡಗಿದನು. ಇದರಿಂದ ಅವನ ಶಿಷ್ಯರ ಸಂಖ್ಯೆ ನೂರರಿಂದ ಇಪ್ಪತ್ತಕ್ಕೆ ಇಳಿದುಬಿಟ್ಟಿತು. ಅವರಲ್ಲಿ ಹತ್ತು ಮಂದಿ ಜಮೀನುದಾರರ ಮಕ್ಕಳೇ. ಉಳಿದವರು ಸಾಮಾನ್ಯ ಕುಟುಂಬದವರು,

ಚಂಡಪ್ರಚಂಡನು ಬಹಳ ಶ್ರದ್ಧೆಯಿಂದ ತನ್ನ ಶಿಷ್ಯರನ್ನು ಸಂಗೀತ ಪಾಠದಲ್ಲಿ ತೀಡತೊಡಗಿದನು. ಅವರನ್ನೆಲ್ಲ ತನ್ನಂತಹ ವಿದ್ವಾಂಸರನ್ನಾಗಿ ಮಾಡಬೇಕೆಂಬುದೇ ಅವನ ಬಯಕೆ. ಆದರೆ ಜಮೀನುದಾರರ ಪ್ರವರ್ತನೆ ಆತನನ್ನು ನೋಯಿಸುತಿತ್ತು.

ಸಾಮಾನ್ಯ ಶಿಷ್ಯರ ತಾಯಿ ತಂದೆಯರು ಚಂಡಪ್ರಚಂಡನ ವಿದ್ವತ್ತನ್ನು ಕುರಿತು, ಅವನ ಬಳಿಗೆ ಬಂದು ಮೆಚ್ಚು ನುಡಿಗಳನ್ನು ಹೇಳಿ ಹೋಗುತ್ತಿದ್ದರು. ಪ್ರತಿ ತಿಂಗಳೂ ಹುಣ್ಣಿಮೆ ಕಳೆದ ಮೇಲೆ ವಿಜಾದಶಿಯ ದಿನ ತಿಂಗಳ ಸಂಬಳವನ್ನು ತಂದು ಅವನಿಗೆ ಒಪ್ಪಿಸುತ್ತಿದ್ದರು. ತಮ್ಮ ಮಕ್ಕಳ ಸಂಗೀತವು ಅವರನ್ನು ಸಂತೋಷಪಡಿಸುತ್ತಿದ್ದಿತು. ಆದರೆ ಜಮೀನುದಾರರು ಮಾತ್ರ ಒಂದು ಸಾರಿ ಕೂಡ ಅವನನ್ನು ಮೆಚ್ಚಿ ಮಾತಾಡಲಿಲ್ಲ. ತಿಂಗಳ ಸಂಬಳ ಕೂಡಾ ಕ್ರಮ ತಪ್ಪದೇ ಕೊಡುತ್ತಿರಲಿಲ್ಲ. ಒಂದೊಂದು

ಸಾರಿ ತನ್ನ ಸಂಬಳದ ವಿಷಯವನ್ನು ಶಿಷ್ಯರ ಹತ್ತಿರ ನೆನಪು ಮಾಡಿಸಬೇಕಾಗಿ ಬರುತ್ತಿತ್ತು.

ಒಂದು ವರ್ಷ ಹೀಗೇ ನಡೆಯಿತು. ತಾನು ಸಂಬಳ ತೆಗೆದುಕೊಂಡು ಸಂಗೀತ ಹೇಳಿಕೊಡುವವ ನೆಂತಲೇ ಜಮೀನುದಾರರು ತನ್ನನ್ನು ಹೊಗಳುವು ದಿಲ್ಲವೆಂದೂ, ಅಲ್ಪ ದೃಷ್ಟಿಯಿಂದ ತನ್ನನ್ನು ನೋಡುವರೆಂದೂ ಚಂಡಪ್ರಚಂಡನಿಗೆ ತೋರ ತೊಡಗಿತು.

ಒಂದು ದಿನ ಚಂಡಪ್ರಚಂಡನು ಜಮೀನುದಾರ ರನ್ನು ನೋಡಿ, "ನನ್ನ ಆರೋಗ್ಯ ಸರಿಯಾಗಿಲ್ಲದು ದರಿಂದ, ಸಂಗೀತ ಶಿಕ್ಷಣಕ್ಕೆ ಬೇರೊಬ್ಬ ಗುರುವನ್ನು ನೋಡಿಕೊಳ್ಳಿ ಸ್ವಾಮಿ" ಎಂದನು.

"ತಮ್ಮ ಆರೋಗ್ಯಕ್ಕಿಂತ ಮುಖ್ಯವಾದುದು ಬೇರೇನೂ ಇಲ್ಲ. ನೀವು ವಿಶ್ರಾಂತಿ ತೆಗೆದುಕೊಳ್ಳಿರಿ. ಮಕ್ಕಳ ಸಂಗೀತಕ್ಕೇನು. ಬೇರೆ ನೋಡಿದರಾಯಿತು" ಎಂದರು ಜಮೀನುದಾರರು.

ಇದನ್ನು ಕೇಳಿ ಚಂಡಪ್ರಚಂಡನಿಗೆ ಜಮೀನು ದಾರರ ಮೇಲೆ ಬಹಳ ಕೋಪವೇ ಉಂಟಾಯಿತು. ಅವರು ತನ್ನನ್ನು ಒತ್ತಾಯಿಸಿ ತಮ್ಮ ಮಕ್ಕಳಿಗೆ ಪಾಠ ಹೇಳಿಕೊಡಬೇಕೆನ್ನುವರೆಂದೂ, ತನ್ನ ಆರೋಗ್ಯದ ವಿಷಯವನ್ನು ತಾವೇ ಎಚ್ಚರಿಕೆ ತೆಗೆದುಕೊಳ್ಳುವರೆಂದೂ ಅಂದುಕೊಂಡುದು ಸುಳ್ಳಾಯಿತು.

ಚಂಡಪ್ರಚಂಡನು ಸುಮ್ಮನೆ ವಿಶ್ರಾಂತಿ ತೆಗೆದು ಕೊಳ್ಳುತ್ತಿರಲು, ಒಂದು ವಾರದೊಳಗೆ ಯಾವನೋ ಒಬ್ಬ ಹೊಸ ಸಂಗೀತ ಗುರು ಜಮೀನುದಾರರಲ್ಲಿಗೆ ಬಂದನು. ಜಮೀನುದಾರರು ಅವನಿಗೆ ತಿಂಗಳಿಗೆ ಸಂಬಳದ ಏರ್ಪಾಡು ಮಾಡಿ, ಪ್ರತಿ ತಿಂಗಳೂ ತಪ್ಪದೆ ಸಂಬಳ ಕೊಡತೊಡಗಿದರು. ಪ್ರತಿ ದಿನಾ ಆತನನ್ನು ಮಾತಾಡಿಸಿ, ಚೆನ್ನಾಗಿ ಪಾಠ ಹೇಳುವಿ ರೆಂದು ಮೆಚ್ಚಿ ಪ್ರೋತ್ಸಾಹಿಸುತ್ತಿದ್ದರು.



ಈ ಹೊಸ ಗುರುವಿನ ಹೆಸರು ಸಂಗೀತಶರ್ಮ. ದೊಡ್ಡ ವಿದ್ವಾಸನಲ್ಲದಿದ್ದರೂ ತನಗೆ ಗೊತ್ತಿದ್ದಷ್ಟನ್ನು ಇತರರಿಗೆ ಕಲಿಸುತ್ತಿದ್ದನು. ಅಲ್ಲದೆ ದೊಡ್ಡ ವಿದ್ವಾಂಸರು ಸಿಕ್ಕಿದರೆ ಅವರ ಹತ್ತಿರ ಇನ್ನೂ ಹೆಚ್ಚಿನದನ್ನು ಕಲಿಯುವ ಆಶೆಯೂ ಆತನಿಗಿತ್ತು. ಅಂತೆಯೇ ಮಹಾ ವಿದ್ವಾಂಸನಾದ ಚಂಡಪ್ರಚಂಡ ನನ್ನು ಕುರಿತು ಕೇಳಿ, ಒಂದು ದಿನ ಅವನ ದರ್ಶನಕ್ಕೆ ಬಂದನು ಸಂಗೀತಶರ್ಮ.

ಚಂಡಪ್ರಚಂಡನು ಸಂಗೀತಶರ್ಮನನ್ನು ಆದರಿಸಿ ಗೌರವಿಸಿ ಕುಶಲ ವಿಚಾರಿಸಿದನು. ಜಮೀನುದಾರರು ಅವನನ್ನು ಹೇಗೆ ಆದರಿಸುವರೆಂಬುದನ್ನು ತಿಳಿದು ಆಶ್ಚರ್ಯಪಟ್ಟನು.

ಮಾತಿಗೆ ಮಾತಾಗಿ ಚಂಡಪ್ರಚಂಡನು ಸಂಗೀತ ಶರ್ಮನೊಂದಿಗೆ, "ನನಗೆ ತಿಳಿದುದನ್ನು ಸಂತೋಷ ವಾಗಿ ನಿಮಗೆ ಹೇಳಿ ಕೊಡುತ್ತೇನೆ. ಆದರೆ ನನ ಗೊಂದು ಸಂದೇಹ, ನಾನು ಅಷ್ಟೇನೂ ತಿಳಿದ

ವಿದ್ವಾಂಸನಲ್ಲವೇನೋ ಎನಿಸುತ್ತದೆ. ಜಮೀನುದಾರರು ನಿಮ್ಮನ್ನು ಗೌರವಿಸಿದಂತೆ ನನ್ನನ್ನು ಗೌರವಿಸುವವರಾಗಿ ಕಾಣುವುದಿಲ್ಲ. ನೀವು ಒಂದು ಮಾಡಿ; ನಾನು ಹೇಳಿದೆನೆಂದು ತಿಳಿಸುವುದು ಬೇಡ. ನೀವಾಗಿ ಕೇಳಿದಂತೆ ನನ್ನಲ್ಲಿರುವ ಲೋಪವೇನೆಂಬುದನ್ನು ಅವರ ಹತ್ತಿರ ಪ್ರಸ್ತಾಪತ್ವೇನ ಕೆದಕಿ ನೋಡಿರಿ. ಅವರೇನು ಹೇಳುವರೋ ನನಗೆ ತಿಳಿಸಿರಿ. ನನ್ನ ಲೋಪವನ್ನು ತಿದ್ದಿಕೊಳ್ಳಲಿಕ್ಕೆ ಅದು ಸಹಾಯವಾದೀತು" ಎಂದನು.

ಈ ವಿಷಯವು ಸಂಗೀತಶರ್ಮನಿಗೂ ಆಶ್ಚರ್ಯವೆನಿಸಿತು. ಅವರು ಜಮೀನುದಾರರೊಂದಿಗೆ ಮಾತಾಡುತ್ತ "ಅಯ್ಯಾ, ತಾವು ನನ್ನ ಮೇಲೆ ಬಹಳ ದಯವುಳ್ಳವರಾಗಿರುವಿರಿ. ಆದರೆ ಈ ಮೊದಲು ಪಾಠ ಮಾಡಿದ ಚಂಡಪ್ರಚಂಡರವರಿಗೆ ತಿಂಗಳ ಸಂಬಳ ಕೂಡಾ ಸರಿಯಾಗಿ ಕೊಡುತ್ತಿದ್ದಿಲ್ಲವೆಂದೂ, ಅವರನ್ನು ಮೆಚ್ಚಿಕೊಳ್ಳುವುದಿಲ್ಲವೆಂದೂ ಕೆಲವರು ಹೇಳಿದರು. ನಾನು ಅವರಿಗಿಂತ ಹೆಚ್ಚಿನ ಗೌರವಕ್ಕೆ ನಿಮ್ಮ ದೃಷ್ಟಿಯಲ್ಲಿ ಹೇಗೆ ಪಾತ್ರನಾದೆನೋ ಕಾರಣ ತಿಳಿದರೆ ಸಂತೋಷ" ಎಂದನು.

ಜಮೀನುದಾರರು ಸಣ್ಣ ನಗುವಿನಿಂದ "ಹೇಳಿದರೆ ನೀವು ನೊಂದುಕೊಳ್ಳಲಾರಿರಷ್ಟೆ?" ಎಂದರು. "ಇದರಲ್ಲಿ ನಾನು ನೊಂದುಕೊಳ್ಳುವಂಥಾದ್ದೇನಿದೆ? ಚಿಂತಿಲ್ಲ, ಹೇಳಿರಿ ಸ್ವಾಮಿ" ಎಂದನು ಸಂಗೀತಶರ್ಮ.

"ನೀವು ಹಣಕ್ಕಾಗಿಯೇ ಸಂಗೀತ ಹೇಳಿಕೊಡುವವರು. ಅವರು ಆತ್ಮಸಂತೋಷಕ್ಕಾಗಿ ಹೇಳಿಕೊಡುವವರು. ಅವರಿಗೆ ತಿಂಗಳ ಸಂಬಳ ಕೊಡಬೇಕಾದರೆ, ಪಾಠಕ್ಕೆ ಇಂತಿಷ್ಟು ಎಂದು ಬೆಲೆ ಕಟ್ಟುವಂತೆ ಆಗುತ್ತದೆ. ಅದು ಅವರ ಅಮೂಲ್ಯತೆಗೆ ಅವಮಾನ ಮಾಡಿದಂತೆ. ಅವರ ಇದಿರೇ ಅವರನ್ನು ಹೊಗಳಿದರೂ ಅಷ್ಟೇ! ದೊಡ್ಡ ದೊಡ್ಡ ರಾಜಮಹಾರಾಜರಿಂದ ಹೊಗಳಿಸಿಕೊಂಡವರು. ನನ್ನ ಹೊಗಳಿಕೆ ಯಾವ ಮೂಲೆಯದು ಹೇಳಿ. ಸ್ವಲ್ಪ ಮಟ್ಟಿಗೆ ಕಲಿತ ವಿದ್ಯೆಯೊಂದಿಗೆ ಹೊಟ್ಟೆ ತುಂಬಿಸಲು ಬಂದ ನಿಮ್ಮಂಥವರನ್ನೂ, ಆ ಮಹಾ ವಿದ್ವಾಂಸರನ್ನೂ ಒಂದೇ ದೃಷ್ಟಿಯಿಂದ ನೋಡಲು ಸಾಧ್ಯವೆ?" ಎಂದರು ಜಮೀನುದಾರರು.

ಈ ಸಂಗತಿಯನ್ನು ಸಂಗೀತ ಶರ್ಮನ ಮೂಲಕವಾಗಿ ತಿಳಿದು ಚಂಡಪ್ರಚಂಡನು, ಜಮೀನುದಾರರನ್ನು ಅಪಾರ್ಥ ಮಾಡಿಕೊಂಡುದಕ್ಕೆ ಬಹಳವಾಗಿ ನೊಂದುಕೊಂಡನು. ಆಮೇಲೆ ಚಂಡಪ್ರಚಂಡನು ಆ ಊರಿನಿಂದ ಹೊರಟುಹೋಗುವಾಗ, ಜಮೀನುದಾರರು ಮಹಾ ಸಭೆ ಸೇರಿಸಿ, ಚಂಡಪ್ರಚಂಡನಿಗೆ ಕಂಕಣ ತೊಡಿಸಿ ಶಾಲು ಹೊದಿಸಿ ಸನ್ಮಾನಿಸಿ ಕಳುಹಿಸಿದರು.





## ವ್ಯರ್ಥವಾದ ಶಪಥ

ಅನೇಕ ನೂರು ವರ್ಷಗಳ ಹಿಂದೆ ನಾಗಪಟ್ಟಣದ ರಾಜನಾಗಿದ್ದ ಶಕ್ತಿ ಸಿಂಹನ ಆಸ್ಥಾನದಲ್ಲಿ, ಇಬ್ಬರು ಪ್ರಮುಖರು ರಾಜನ ವಿಶ್ವಾಸಕ್ಕೂ, ಆದರ, ಅಭಿಮಾನಗಳಿಗೂ ಪಾತ್ರರಾಗಿದ್ದರು. ಅದಕ್ಕೆ ಕಾರಣವಿದ್ದಿತು. ಅವರಲ್ಲೊಬ್ಬನು ಸೂರ್ಯವರ್ಮನೆಂಬ ಸಾಮಂತನು ರಾಜನಿಗೆ ಸಮೀಪದ ಬಂಧುವೇ. ಆತನಿಗೆ ಸೀಮಂತಿನಿ ಎಂಬ ವಿವಾಹಕ್ಕೆ ತಕ್ಕ ಪ್ರಾಯ ಬಂದ ಒಬ್ಬಳು ಮಗಳೂ ಇದ್ದಳು.

ಮಹಾ ರಾಜನಿಗೆ ಪ್ರಾಣಕ್ಕಿಂತಲೂ ಪ್ರಿಯನಾದ ಎರಡನೇಯವನು ಚಂದ್ರಪಾಲನೆಂಬ ಯುವಕ. ಅವನು ರಾಜನ ಪ್ರಧಾನ ಅಂಗರಕ್ಷಕ. ಮಹಾರಾಜನು ಯುದ್ಧಕ್ಕೆ ಹೊರಟಾಗ ಕೂಡಾ ಚಂದ್ರಪಾಲನು ರಾಜನೊಂದಿಗಿದ್ದು ಅಸಾಧಾರಣವಾದ ವೀರ ಪರಾಕ್ರಮಗಳಿಂದ ಯುದ್ಧ ಮಾಡುವನು. ಸಾಹಸ ತೋರಿಸುವನು. ಅನೇಕ ಬಾರಿ ರಾಜನ ಪ್ರಾಣಕ್ಕೆ ತನ್ನ ಪ್ರಾಣವನ್ನು ಪಣವೊಡ್ಡಿ ನಿಂತು ರಾಜನನ್ನು ರಕ್ಷಿಸಿದ್ದನು.

ಯುದ್ಧರಂಗದಲ್ಲಿ ಅವನು ಎಷ್ಟೋ ಸಾರಿ ತನ್ನ ಪ್ರಾಣವನ್ನು ತೃಣಕ್ಕೆ ಸಮಾನವಾಗಿ ಎಣಿಸಿ, ವೀರ ಸಾಹಸ ಪರಾಕ್ರಮಗಳಿಂದ ಮಹಾರಾಜನನ್ನು ಸಾವಿನಿಂದ ತಪ್ಪಿಸಿದ್ದನು. ಆದುದರಿಂದ ಮಹಾರಾಜನು ಅವನನ್ನು ಮಗನಿಗಿಂತ ಹೆಚ್ಚು ಮಮಕಾರದಿಂದ ನೋಡುತ್ತಿದ್ದನು. ಅದನ್ನು ನೋಡಿ ರಾಜಭಟರಲ್ಲಿ ಪ್ರತಿಯೊಬ್ಬನೂ ಚಂದ್ರಪಾಲನನ್ನು ದೇವರಂತೆ ಪೂಜಿಸುತ್ತಿದ್ದರು.

ಸೂರ್ಯವರ್ಮನ ಕುಮಾರಿಯಾದ ಸೀಮಂತಿನಿ ಮೊದಲಿನಿಂದಲೂ ಚಂದ್ರಪಾಲನ ಮೇಲೆ ಜೀವವಿಟ್ಟವಳು. ಈಗ ಅವನೇ ತನ್ನ ಗಂಡನೆಂದು ಅರಿಸಿಕೊಂಡಿದ್ದಳು. ಕಡೆಗೆ ತನ್ನ ಪ್ರೇಮವನ್ನು ಮುಚ್ಚಿಟ್ಟುಕೊಳ್ಳಲಾಗದೆ, ಚಂದ್ರಪಾಲನನ್ನು ಕರೆಯಿಸಿ ಮಾತಾಡಿಸಿದಳು. ಇಬ್ಬರೂ ಒಬ್ಬರನ್ನೊಬ್ಬರು ಪ್ರೇಮಿಸಿಕೊಂಡುದರಿಂದ, ಯಾರು ಒಪ್ಪಿದರೂ ಬಿಟ್ಟರೂ ತಾವು ವಿವಾಹಬಂಧನ ಮಾಡಿಕೊಳ್ಳುವುದೆಂಬ ನಿಶ್ಚಯಕ್ಕೂ ಬಂದರು.

ಚಂದ್ರಪಾಲನು ಈ ವಿಷಯವನ್ನು ಮಹಾರಾಜನೊಂದಿಗೆ ಹೇಳಿದನು. ಅದಕ್ಕೆ ಒಪ್ಪಿಕೊಂಡ ರಾಜನು ಸೂರ್ಯವರ್ಮನನ್ನು ಕರೆದು, "ನಿನ್ನ ಮಗಳು ಸೀಮಂತಿನಿಯನ್ನು ಚಂದ್ರಪಾಲನು ಪ್ರೇಮಿಸುವು

**೨೫ ವರ್ಷಗಳ ಹಿಂದಿನ ಚಂದಮಾಮಾ ಕಥೆ**



ದಾಗಿ ಗೊತ್ತಾಯಿತು. ಇಬ್ಬರೂ ಒಬ್ಬರಿಗೊಬ್ಬರು ಜೋಡಿಯಾಗಿದ್ದಾರೆ. ಅವರಿಬ್ಬರಿಗೆ ಮದುವೆ ಮಾಡಿ ಸೋಣವೆ ?" ಎಂದು ಕೇಳಿದನು.

ಆ ಮಾತುಕೇಳಿ ಸೂರ್ಯವರ್ಮನ ಬಾಯಿಗೆ ಕಹಿ ಬಿದ್ದಂತೆ ಮುಖವು ಚಿರುಟಿತು. "ಅದೆಂದಿಗೂ ಸಾಧ್ಯ ವಿಲ್ಲ. ಈ ಮದುವೆಗೆ ನಾನು ಎಂದಿಗೂ ಒಪ್ಪಲಾರೆ. ಅಸಲು ನನ್ನ ಮಗಳು ಚಂದ್ರಪಾಲನನ್ನು ಪ್ರೇಮಿಸುವ ಳೆಂದರೆ ಕೂಡಾ ನಾನು ನಂಬಲಾರೆ" ಎಂದನು ರಾಜನೊಂದಿಗೆ.

ಸೂರ್ಯವರ್ಮನು ಮನೆಗೆಹೋಗಿ ಕುಮಾರಿ ಸೀಮಂತಿನಿಯೊಂದಿಗೆ ಅವಳ ಮದುವೆಯನ್ನು ಕುರಿತು ವಿಚಾರಿಸಿದನು. ತಾನು ಚಂದ್ರಫಾಲನನ್ನು ಪ್ರೇಮಿ ಸುವುದು ನಿಜವೆಂದು ಸೀಮಂತಿನಿ ಒಪ್ಪಿಕೊಂಡು ದನ್ನು ಕೇಳಿ, ಸೂರ್ಯವರ್ಮನು ಕಟ್ಟಕೋಪದಿಂದ ಮಗಳನ್ನು ನಾನಾವಿಧವಾಗಿ ಬೈದನು. ಭಯಂಕರ ಪರಿಣಾಮವನ್ನು ಹೇಳಿ ಹೆದರಿಸಿದನು.

ಈ ಸಂಗತಿ ನಡೆದ ಮಾರನೇ ದಿನದಲ್ಲಿ ಸೀಮಂತಿನಿ ಮನೆಯವರಾರಿಗೂ ಗೊತ್ತಾಗದಂತೆ ಚಂದ್ರಪಾಲನ ಮನೆಗೆ ಹೋಗಿ, ನಡೆದ ಸಂಗತಿಯನ್ನು ಚಂದ್ರಪಾಲ ನೊಂದಿಗೆ ಹೇಳಿದಳು. ಅವರಿಬ್ಬರೂ ಒಬ್ಬ ಪುರೋ ಹಿತನ ಬಳಿಗೆ ಹೋಗಿ, ಆತನ ಮೂಲಕ ಕುಲದೇವರ ಸನ್ನಿಧಿಯಲ್ಲಿ ಅಗ್ನಿ ಸಾಕ್ಷಿಯಾಗಿ ಮದುವೆ ಮಾಡಿ ಕೊಂಡು, ಸೀದಾ ಕಾಡಿಗೆ ಹೋಗಿ ಅಲ್ಲಿಯೇ ತಮ್ಮ ಸಂಸಾರ ಹೂಡಿಕೊಂಡರು.

ಆ ಕಾಡು ಚಂದ್ರಪಾಲನ ಸ್ವಂತದ್ದೇ ಆಗಿತ್ತು. ಎರಡು ವರ್ಷಗಳ ಹಿಂದೆ ರಾಜನು ಚಂದ್ರಪಾಲನಿಗೆ ನಗರದ ಹೊರಗೆ ಸ್ವಲ್ಪ ಭೂಮಿಯನ್ನು ಮಾನ್ಯ ವಾಗಿ ಕೊಟ್ಟಿದ್ದನು.

ಅದರ ಒಂದು ಭಾಗದಲ್ಲಿ ಅಶೋಕ ವೃಕ್ಷಗಳು ಮಾತ್ರವೇ ಇರುವ ಒಂದು ಕಾಡು ಇತ್ತು. ಅಲ್ಲಿಯೇ ಸೊಗಸಾಗಿದ್ದುದರಿಂದ, ಚಂದ್ರಪಾಲನು ಅಂದ ವಾದೊಂದು ಕುಟೀರವನ್ನು ನಿರ್ಮಿಸಿಕೊಂಡನು.

ಸೂರ್ಯವರ್ಮನು ಮಹಾರಾಜನೊಂದಿಗೆ ಏಕಾಂತದಲ್ಲಿ ಮಾತಾಡಿ, "ಈಗ ನನಗೆ ನಾಲ್ವರ ಮುಂದೆ ತಲೆಯೆತ್ತಿ ತಿರುಗದ ಸ್ಥಿತಿ ಬಂತು. ನನ್ನ ಮಗಳನ್ನು ನನಗೆ ಒಪ್ಪಿಸಿ ಬಿಡುವಂತೆ ನೀವು ಹೇಳಿ ಬಿಟ್ಟರೆ, ಚಂದ್ರಪಾಲನು ನಿಮ್ಮ ಮಾತು ಮೀರು ವವನಲ್ಲ" ಎಂದನು.

"ಹಾಗೆಯೇ ಹೇಳುತ್ತೇನೆ" ಎಂದು ರಾಜನು ಅವನನ್ನು ಕಳುಹಿಸಿಕೊಟ್ಟ ಮೇಲೆ, ಉಭಯಸಂಕಟ ಕ್ಕೊಳಗಾದುದರಿಂದ ಏನೂ ಹೇಳದೆ, ಏನೂ ಮಾಡದೆ ಸುಮ್ಮನೆ ಇದ್ದು ಬಿಟ್ಟನು.

ಮನಸ್ಸಿನಲ್ಲಿ ದಹಿಸಿಕೊಂಡಿದ್ದ ಸೂರ್ಯವರ್ಮನು, ರಾಜನಿಂದ ಏನೋ ಒಂದು ಮಾಡಿಸಿ ಬಿಡಬೇಕೆಂಬ ಉದ್ದೇಶದಲ್ಲಿ ಒಂದು ಉಪಾಯ ಮಾಡಿದನು. ಅವನು ತುಂಬಿದ ಸಭೆಯಲ್ಲಿ ಎದ್ದು ನಿಂತು, "ಮಹಾರಾಜರೆ ! ಚಂದ್ರಪಾಲನು ನನ್ನ ಕುಮಾರಿಯನ್ನು ಬಲಾತ್ಕಾರ

ದಿಂದ ಅಪಹರಿಸಿಕೊಂಡು ಹೋಗಿ, ಅರಣ್ಯದಲ್ಲಿ ಅಡಗಿಸಿದ್ದಾನೆಂದು ಗೊತ್ತಾಗಿದೆ, ಇದನ್ನು ನ್ಯಾಯ ವೆಂದು ಯಾರೂ ಹೇಳಲಾರರು. ಆದುದರಿಂದ ಅವಳನ್ನು ತಿರುಗಿ ನನಗೆ ಒಪ್ಪಿಸಿ, ಆ ದುಷ್ಟನನ್ನು ಶಿಕ್ಷಿಸಿ, ನನಗೆ ನ್ಯಾಯವನ್ನು ನೀಡಬೇಕೆಂದು ಈ ಮಹಾಸಭೆಯಲ್ಲಿ ಕೇಳಿಕೊಳ್ಳುತ್ತೇನೆ" ಎಂದನು.

ಈಗ ರಾಜನು ಏನಾದರೊಂದು ಮಾಡಲೇ ಬೇಕಾಯಿತು. ಅವನು ರಾಜಭಟರನ್ನು ಕರೆದು, "ನೀವು ಅರಣ್ಯಕ್ಕೆ ಹೋಗಿ, ಚಂದ್ರಪಾಲನನ್ನು ಬಂಧಿಸಿ ಇಲ್ಲಿಗೆ ತನ್ನಿರಿ. ಸೀಮಂತಿನಿಯನ್ನು ಕ್ಷೇಮ ಭದ್ರತೆಯಿಂದ ಕರೆದುತಂದು ಸೂರ್ಯವರ್ಮನಿಗೆ ಒಪ್ಪಿಸಿರಿ" ಎಂದು ಆಜ್ಞೆ ಮಾಡಿದನು.

ಕೂಡಲೇ ರಾಜಭಟರು ಅಶೋಕವನಕ್ಕೆ ಹೊರಟರು. ಸೂರ್ಯವರ್ಮನು ಕೂಡಾ ಕತ್ತಿಹಿಡಿದುಕೊಂಡು ಮಹಾವೀರನಂತೆ ಅವರೊಂದಿಗೆ ಹೋದನು.

ನಿಜಕ್ಕೂ ರಾಜಭಟರಿಗೆಲ್ಲಾ ಚಂದ್ರಪಾಲನ ಮೇಲೆ ಒಳ್ಳೆಯ ಅಭಿಮಾನವಿದ್ದಿತು. ಅವನೊಂದಿಗೆ ಯುದ್ಧ ಮಾಡುವುದೋ, ಬಂಧಿಸುವುದೋ, ಬಲಾತ್ಕರಿಸುವುದೋ ಅವರಾರಿಗೂ ಇಷ್ಟವಿಲ್ಲ. ಆದುದರಿಂದ ಅವರು ತಮ್ಮೊಳಗಿನ ಇಬ್ಬರನ್ನು ಮುಂದಾಗಿ ಚಂದ್ರಪಾಲನ ಬಳಿಗೆ ಕಳುಹಿಸಿ, ನಡೆದ ಸಂಗತಿ ಅವನಿಗೆ ತಿಳಿಯುವಂತೆ ಮಾಡಿಬಿಟ್ಟರು.

ಸೂರ್ಯವರ್ಮನು ತನ್ನನ್ನು ಬಂಧಿಸಲು ರಾಜಭಟರೊಂದಿಗೆ ಬರುತ್ತಾನೆಂದು ತಿಳಿದ ಕೂಡಲೇ ಚಂದ್ರಪಾಲನು ಸೀಮಂತಿನಿಯನ್ನು ಕರೆದೊಯ್ದು, ಅರಣ್ಯದೊಳಗೆ ದೂರದಲ್ಲಿದ್ದೊಂದು ರಹಸ್ಯ ಸ್ಥಳದಲ್ಲಿ ಅಡಗಿರಲು ಹೇಳಿ, ಕೆಲವು ಗುಡಿಸಲಿನವರನ್ನು ಕಾವಲಿಗಿಟ್ಟು, ತನ್ನ ಕುಟೀರಕ್ಕೆ ಬಂದು ಬಿಟ್ಟನು. ಸ್ವಲ್ಪ ಹೊತ್ತಿಗೆಲ್ಲಾ ಸೂರ್ಯವರ್ಮನು ರಾಜಭಟರೊಂದಿಗೆ ಬಂದು, ಭಟರನ್ನು ಕುಟೀರದ ಸುತ್ತಲೂ ನಿಲ್ಲಿಸಿ, ಬಾಗಿಲು ತಟ್ಟಿದನು.

ಕೂಡಲೇ ಚಂದ್ರಪಾಲನು ಹೊರಗೆ ಬಂದು, ಸೂರ್ಯವರ್ಮನನ್ನು ತಲೆಯಿಂದ ಕಾಲಿನ ವರೆಗೂ ನೋಡಿ, "ನಿಮಗೆ ಶೌರ್ಯವಿಲ್ಲವೇನು ? ಪರಾ





ಕ್ರಮವು ಕುಂಠಿಸಿ ಹೋಯಿತೆ? ಇಷ್ಟು ಮಂದಿಯೊಂದಿಗೆ ಬಂದಿರೀಕೆ? ಇವತ್ತು ನೀವೋ ನಾನೋ ಎಂಬುದು ಸ್ಪಷ್ಟವಾಗಲಿ! ಸಿದ್ಧರಾಗಿರಿ!" ಎಂದು ಸರ್ರನೆ ಕತ್ತಿ ಹಿರಿದನು.

"ನಿನ್ನಂಥ ಕಳ್ಳನೊಡನೆ ಯುದ್ಧಮಾಡುವ ಕರ್ಮ ನನಗೇನು ಬಂತು? ಎಲೋ, ಈ ನೀಚನನ್ನು ಹಿಡಿದು ಬಂಧಿಸಿರಿ!" ಎಂದು ಸೂರ್ಯವರ್ಮನು ಭಟರಿಗೆ ಹೇಳಿದನು.

ಆದರೆ ಒಬ್ಬ ಭಟನೂ ನಿಂತಲ್ಲಿಂದ ಕದಲಲಿಲ್ಲ. ಚಂದ್ರಪಾಲನು ದ್ವಂದ್ವ ಯುದ್ಧಕ್ಕೆ ಸಿದ್ಧನಾಗುವಾಗ, ಅದಕ್ಕೆ ಒಲ್ಲದ ಸೂರ್ಯವರ್ಮನ ಮೇಲೆ ಅವರಿಗೆಲ್ಲ ಅಸಹ್ಯಹುಟ್ಟಿತು.

"ಸರಿ. ಹಾಗಾದರೆ ಹಿಡಿಯಿರಿ!" ಎಂದು ಚಂದ್ರಪಾಲನು ರಾಜಭಟರ ನಡುವಿನಿಂದಾಗಿ ರಭಸದಿಂದ ತೂರಿಕೊಂಡು ಅರಣ್ಯದೊಳಗೆ ಓಡಿದನು. ರಾಜಭಟರು ಹಾರಿ ಸರಿದು ಅವನಿಗೆ ದಾರಿ ಬಿಟ್ಟರೇ ಹೊರತು, ಅವನನ್ನು ಹಿಡಿಯುವ ಗೊಡವೆಗೆ ಹೋಗಲಿಲ್ಲ. ಕುಟೀರದೊಳಗೆ ಎಷ್ಟು ಹುಡುಕಿದರೂ ಸೀಮಂತಿನಿ ಕಾಣಲೂ ಇಲ್ಲ. ಸೂರ್ಯವರ್ಮನು ಮಾಡಿದ ಇಷ್ಟು ದೊಡ್ಡ ಪ್ರಯತ್ನವು ಬೂದಿಗೆಸುರಿದ ಪನ್ನೀರಿನಂತಾಯಿತು.

ಇನ್ನು ರಾಜನನ್ನು ನಂಬಿದರೆ ಪ್ರಯೋಜನವಿಲ್ಲವೆಂದುಕೊಂಡು ಸೂರ್ಯವರ್ಮನು ಇನ್ನೊಂದು ಎತ್ತುಗಡೆ ಮಾಡಿದನು. ಅವನು ಕೆಲ ಮಂದಿ ಕವಿಗಳನ್ನೂ, ಗಾಯಕರನ್ನೂ ಕರೆಯಿಸಿ, ಅವರಿಗೆ ತೃಪ್ತಿಯಾಗುವಷ್ಟು ಹಣವನ್ನು ಕೊಟ್ಟು, "ನೀವು ಅಶೋಕ ವನಕ್ಕೆ ಹೋಗಿ, ಅಲ್ಲಿರುವ ಚಂದ್ರಪಾಲನನ್ನು ಹೊಗಳುತ್ತ, ಕೀರ್ತಿಸುತ್ತ ಪದ್ಯಗಳನ್ನು ಹಾಡಿರಿ. ಅದರಲ್ಲಿ ಅವನು ಲಯಿಸಿಕೊಂಡಿರುವಾಗ ನಮ್ಮ ಭಟರು ಅವನನ್ನು ಹಿಡಿದು ಬಂಧಿಸಿ ತರುತ್ತಾರೆ. ಅಷ್ಟಾದ ಮೇಲೆ ನೀವೆಲ್ಲಾ ನಿಮ್ಮ ದಾರಿಹಿಡಿದು ಹೋಗಿಬಿಡಿರಿ" ಎಂದನು.

ಈ ಉಪಾಯ ನೆಗ್ಗಿತು. ಕವಿ ಗಾಯಕರು ಚಂದ್ರಪಾಲನ ಕುಟೀರದ ಹತ್ತಿರಹೋಗಿ, ಸ್ತೋತ್ರ ಪಾಠಗಳನ್ನು ಹಾಡಿಕೊಂಡಿರುವ ಸಮಯದಲ್ಲಿ, ಸೂರ್ಯವರ್ಮನ ನೌಕರರು ಆಕಸ್ಮಾತ್ತಾಗಿ ಚಂದ್ರಪಾಲನ ಮೇಲೆ ಬಿದ್ದು ಹಿಡಿದು ಬಂಧಿಸಿ, ಸೂರ್ಯವರ್ಮನ ಇದಿರಿಗೆ ಒಯ್ದು ನಿಲ್ಲಿಸಿದರು.

ಸೂರ್ಯವರ್ಮನು ಚಂದ್ರಪಾಲನನ್ನು ಎಳೆದುಕೊಂಡು ಹೋಗಿ ರಾಜನ ಮುಂದೆ ನಿಲ್ಲಿಸಿ, "ಮಹಾರಾಜಾ, ದೋಷಿಯನ್ನು ಹಿಡಿದು ತಂದಿದ್ದೇನೆ. ವಿಚಾರಿಸಿರಿ!" ಎಂದನು.

ರಾಜನು ಚಂದ್ರಪಾಲನನ್ನು ನೋಡಿ, "ನೀನು ಸೀಮಂತಿನಿಯನ್ನು ಬಲಾತ್ಕಾರದಿಂದ ಅಪಹರಿಸಿದಿಯಂತೆ. ಇದಕ್ಕೇನು ಹೇಳುವಿ?" ಎಂದು ಕೇಳಿದನು.

"ಅದೇ ನನ್ನ ಮೇಲಿನ ಆರೋಪಣೆಯಾಗಿದ್ದರೆ, ನಾನು ನಿರ್ದೋಷಿಯೇ ನಿಜ. ಸೀಮಂತಿನಿ ಬುದ್ಧಿ

ಪೂರ್ವಕವಾಗಿಯೇ ನನ್ನ ಬಳಿಗೆ ಬಂದು ನನ್ನನ್ನು ಮದುಮಾಡಿಕೊಂಡಿದ್ದಾಳೆ" ಎಂದನು ಚಂದ್ರಪಾಲ.

ಆಗ ಸೂರ್ಯವರ್ಮನು ಕೋಪಾವೇಶದಿಂದ, "ನಾನು ಇವನಿಗೆ ಕನ್ಯಾದಾನ ಮಾಡಲಿಲ್ಲ. ಆದುದ ರಿಂದ ತಂದೆಯಾದ ನನಗೆ ಸೀಮಂತಿನಿಯ ಮೇಲಿನ ನನ್ನ ಹಕ್ಕು ಹಾಗೆಯೇ ಇದೆ. ಈ ಮದುವೆ ನಡೆಯು ವಂಥದಲ್ಲ" ಎಂದನು.

ರಾಜನು ಉಭಯರಿಗೂ ಹೇಗೋ ಸಮಾಧಾನ ಪಡಿಸಬೇಕೆಂದು ಪ್ರಯತ್ನಿಸಿದನು. ಸೀಮಂತಿನಿಯ ಮೇಲಿನ ಹಕ್ಕನ್ನು ಬಿಟ್ಟುಕೊಡಲು, ಸೂರ್ಯ ವರ್ಮನೂ ಒಪ್ಪಲಿಲ್ಲ, ಚಂದ್ರಪಾಲನೂ ಸಮ್ಮತಿಸ ಲಿಲ್ಲ. ರಾಜನಿಗೆ ಇಕ್ಕಟ್ಟಿಗಿಟ್ಟಿತು.

ಕೊನೆಗೆ ರಾಜನು ಬೇಸತ್ತು, "ಸರಿ, ನನ್ನ ತೀರ್ಪನ್ನು ಕೇಳಿರಿ. ಸೀಮಂತಿನಿ ಇಬ್ಬರ ಹತ್ತಿರವೂ ಇರತಕ್ಕದ್ದು. ಮರಗಳ ಎಲೆಗಳು ಉದುರುವ ವರೆಗೂ ಗಂಡನ ಹತ್ತಿರವಿದ್ದು, ಮರಗಳ ಎಲೆಯುದುರಿ ಬೋಳಾದ ಮೇಲೆ ತಂದೆಯ ಮನೆಗೆ ಬರತಕ್ಕದ್ದು. ಮತ್ತೆ ಮರಗಳು ಚಿಗುರಿದಕೂಡಲೇ ಗಂಡನ ಬಳಿಗೆ ಹಿಂದಿರುಗಿ ಬಿಡಬೇಕು" ಎಂದನು.

ರಾಜನ ಈ ತೀರ್ಪು ಸೂರ್ಯವರ್ಮನಿಗೂ, ಹಿಡಿಸಲಿಲ್ಲ. ಚಂದ್ರಪಾಲನಿಗೂ ರುಚಿಸಲಿಲ್ಲ. ಆದರೆ ರಾಜನ ತೀರ್ಪಿಗೆ ಇಬ್ಬರೂ ಒಪ್ಪದೆ ಗತ್ಯಂತರವಿಲ್ಲ.

ಅನಂತರ ಕಾಲ ಕಳೆಯುತ್ತಿರಲು ಎಲೆಯುದುರುವ ಕಾಲವು ಬಂದಿತು. ಮರಗಳೆಲ್ಲಾ ಬೋಳಾಗುತ್ತ, ಬಂದುವು. ಸೂರ್ಯವರ್ಮನು ತನ್ನ ಕುಮಾರಿಯ ಬಳಿಗೆ ತನ್ನ ಆಳುಗಳನ್ನು ಕಳುಹಿಸಿ, ರಾಜನ ತೀರ್ಪನ್ನು ಅವಳಿಗೆ ಹೇಳಿ ಕರೆತರಲು ನಿಯೋಜಿಸಿದನು. ಒಂದು ಸಾರಿ ಅವಳು ತೌರಿಗೆಬಂದರೆ ಮತ್ತೆ ಗಂಡನಬಳಿಗೆ ಹೋಗಲಾಗದಂತೆ ಮಾಡಬೇಕೆಂಬುದು ಅವನ ಉದ್ದೇಶವಾಗಿತ್ತು.

ಸೀಮಂತಿನಿ ತನ್ನ ತಂದೆಯ ಆಳುಗಳು ಹೇಳಿದು ದನ್ನೆಲ್ಲಾ ಕೇಳಿದಳು. ಅನಂತರ ಅವರೊಂದಿಗೆ, "ಎಲೆ ಗಳು ಉದುರಿ ಮರಗಳು ಬೋಳಾದ ಮೇಲೆ ತಾನೇ ನಾನು ತಂದೆಯ ಮನೆಗೆ ಬರಬೇಕು ? ಇಲ್ಲಿನ ಮರಗಳ ಎಲೆಗಳು ಇನ್ನೂ ಉದರಲಿಲ್ಲ. ಈ ಮರಗಳು ಬೋಳಾದ ಮೇಲೆ ಹಾಗೆಯೇ ಬರುತ್ತೇನೆಂದು ಹೇಳಿರಿ" ಎಂದು ಅವರಿಗೆ ಸುತ್ತು ಮುತ್ತಲೂ ಇರುವ ಅಶೋಕ ವೃಕ್ಷಗಳನ್ನು ತೋರಿಸಿದಳು. ಅವಳು ಹೇಳಿದುದು ನಿಜವೇ. ಸೂರ್ಯವರ್ಮನ ಆಳುಗಳು ಹಿಂದಿರುಗಿದರು.

ಅಶೋಕವೃಕ್ಷಗಳು ಎಲೆಗಳನ್ನು ಉದುರಿಸುವು ದಿಲ್ಲ. ಎಂದಿಗೂ ಆ ಮರಗಳು ಬೋಳಾಗುವುದಿಲ್ಲ. ಆದುದರಿಂದ ಸೀಮಂತಿನಿ ಮತ್ತೆ ತನ್ನ ತಂದೆಯ ಮನೆಗೆ ಹೋಗಲೂ ಇಲ್ಲ.





# ಬದುಕಿನ ಭಯ

ಹಿಂದೆ ಒಂದು ಊರಿನಲ್ಲಿ ವೀರಪ್ಪನೆಂಬ ಭಿಕ್ಷುಕನಿದ್ದನು. ಅವನಿಗೆ ತನ್ನ ಬದುಕಿನ ಮೇಲೆ ಅಸಹ್ಯ ಹುಟ್ಟಿ ಕಡೆಗೆ ಆತ್ಮಹತ್ಯ ಮಾಡಿಕೊಳ್ಳ ಬೇಕೆಂಬ ಗಟ್ಟಿ ನಿಶ್ಚಯಕ್ಕೆ ಬಂದನು. ಅದಕ್ಕಾಗಿ ಅವನು ಅರಣ್ಯದಲ್ಲಿರುವ ಗುಡ್ಡದ ಕಡೆಗೆ ನಡೆಯುತ್ತಿರಲು, ದಾರಿಯಲ್ಲಿ ಆನಂದನೆಂಬೊಬ್ಬನು ಏನೂ ತೋರದೆ ನಿಂತಿರುವುದನ್ನು ನೋಡಿದನು.

ಮಾತಾಡಿಸಿದಾಗ ಆನಂದನೂ ಜೀವಿತದ ಮೇಲೆ ಬೇಸತ್ತು, ಆತ್ಮಹತ್ಯಕ್ಕೆ ಬಂದವನೆಂದು ತಿಳಿಯಿತು. ಸಾಯಲು ಧೈರ್ಯಬಂದು, ಜತೆಗೆ ಇನ್ನೊಬ್ಬನು ಸಿಕ್ಕಿದುದರಿಂದ ಆನಂದನಿಗೆ ಸಂತೋಷವಾಯಿತು. ಇಬ್ಬರೂ ಗುಡ್ಡವನ್ನೇರಿ, ಒಂದು ಪಾತಳಿಗೆ ಧುಮುಕಬೇಕೆಂದಿರುವಾಗ, ಪಕ್ಕದ ಗುಹೆಯೊಳಗಿನಿಂದ ಒಬ್ಬ ಭಯಂಕರ ರಾಕ್ಷಸನು ಹೊರಬಿದ್ದು, ಅವರನ್ನು ಹಿಡಿದುಕೊಂಡನು.

ವೀರಪ್ಪನೂ ಆನಂದನೂ ಸ್ವಲ್ಪವೂ ಹೆದರದೆ, "ಒಳ್ಳೇದೇ ಆಯಿತು. ನಾವು ಸಾಯಲಿಕ್ಕೆ ಬಂದೆವು. ನಾವಾಗಿ ಸಾಯುವ ಆ ಕಷ್ಟ ತಪ್ಪಿತು. ಒಬ್ಬನ ಹಸಿವಿಗೆ ಆದೆವು!" ಎಂದರು.

ರಾಕ್ಷಸನು ಆಶ್ಚರ್ಯದಿಂದ ಆತ್ಮಹತ್ಯ ಮಾಡಿಕೊಳ್ಳುವ ಕಷ್ಟ ನಿಮಗೇನು ಬಂತೆಂದು ಕುತೂಹಲದಿಂದ ಕೇಳಿದನು.

ಅದಕ್ಕೆ ವೀರಪ್ಪ, "ನಾನೊಬ್ಬ ಭಿಕ್ಷುಕ. ನನ್ನ ತಂದೆ ತಾತಂದಿರು ಕೂಡಾ ಭಿಕ್ಷುಕರೇ. ನನಗೆ ರೋಸಿ ಹೋಯ್ತು. ಪ್ರತಿಯೊಬ್ಬರೂ ನನ್ನನ್ನು ನೋಡಿ ಅಸಹ್ಯ ಪಟ್ಟುಕೊಂಡು ದೊಡ್ಡಕೋಣನ ಹಾಗಿದ್ದಿ, ಸೋಮಾರಿ ಮೃಗ ಅಂತ ಬಯ್ಯುತ್ತಾರೆ. ಬದುಕುವುದೇ ಬೇಡೆನ್ನಿಸಿತು" ಎಂದನು.

ರಾಕ್ಷಸನು ಆನಂದನನ್ನೂ ಹಾಗೆಯೇ ಕೇಳಿದನು. ಆನಂದನು ಚಿಂತೆಯ ಮುಖದಿಂದ, "ನನ್ನ ಕಷ್ಟ ಏನು ಹೇಳಲಯ್ಯಾ! ನನಗೆ ಸ್ವಲ್ಪ ಹೊಲವೇನೋ ಇದೆ. ಆದರೆ ನನ್ನ ಹೆಂಡತಿಗೆ ಮಿತಿಮೀರಿದ ನಗಗಳ ಹುಚ್ಚು. ನನ್ನ ಶಕ್ತಿಗೆ ಮೀರಿದ್ದನ್ನು ಹೇಗೆ ತರುವುದೆಂದರೆ ಕೇಳುವುದಿಲ್ಲ. ಈ ಕಾಟ ಸಹಿಸಲಾರದೆ ಬದುಕುವುದೇ ಭಯಂಕರವಾಯಿತು. ಸಾಯುವುದೇ ನಿಶ್ಚಿಂತೆ ಎನಿಸಿತು. ನಿನ್ನಿಂದ ಆ ಕಾರ್ಯ ಬೇಗನೇ ಆಗಲೆಂದು ಸಂತೋಷದಿಂದ ಹೇಳುತ್ತೇನೆ. ಮುಗಿಸಿಬಿಡು" ಎಂದನು.

ವಿ. ಬಾಬುರಾವು

ಕೂಡಲೇ ರಾಕ್ಷಸನು ಗುಹೆಯೊಳಗೆ ಹೋಗಿ, ಎರಡು ಚೀಲಗಳ ತುಂಬಾ ಚಿನ್ನದ ನಾಣ್ಯಗಳನ್ನು ತಂದು, ಮೊದಲು ಒಂದು ಚೀಲವನ್ನು ವೀರಪ್ಪನಿಗೆ ಕೊಟ್ಟು, "ಊರವರು ನಿನಗೆ ಭಿಕ್ಷೆ ಹಾಕದೆ ಸೋಮಾರಿ ಕೋಣನೆಂದು ಬೈದು ಓಡಿಸುವುದರಲ್ಲಿ ತಪ್ಪೇ ಇಲ್ಲ. ನಿನ್ನಿಂದ ಕೆಲಸಮಾಡುವ ತ್ರಾಣವಿದ್ದರೂ ನಿನಗೆ ಮೈ ಬಗ್ಗಿಸಲು ಮನಸ್ಸಿಲ್ಲ. ನಿನ್ನ ಉದಾಸೀನ ಹೋಗುವವರೆಗೂ ಈ ಧನದಿಂದ ಕೂತಲ್ಲೇ ಏನಾದರೂ ವ್ಯಾಪಾರಮಾಡು. ಒಂದು ವರ್ಷ ಕಳೆದ ಮೇಲೆ ಇದೇದಿನ ಇಲ್ಲಿಗೆ ಬಂದು ನನ್ನನ್ನು ನೋಡು, ತಪ್ಪದೆ ಬಾ" ಎಂದನು.

ತರುವಾಯ ಎರಡನೇ ಚೀಲವನ್ನು ಆನಂದನಿಗೆ ಕೊಟ್ಟು, "ಈ ಧನದಿಂದ ನಿನ್ನ ಹೆಂಡತಿಗೆ ನಗಗಳನ್ನು ಮಾಡಿಸಿ, ಅಷ್ಟಕ್ಕೇ ತೃಪ್ತಳಾಗಬೇಕೆಂದು ಹೇಳು. ಸಾವು ಅಂದರೆ ಭಯವೇನಿಲ್ಲದಷ್ಟು ಧೈರ್ಯವಂತನಾದ ನೀನು, ಹೆಂಡತಿಗೆ ಹೆದರಿ ಸಾಯಲು ಬಂದದ್ದು ನಾಚಿಕೆ ಗೇಡು" ಎಂದನು.

ವೀರಪ್ಪನಿಗೆ ಹೇಳಿದಂತೆಯೇ ಒಂದು ವರ್ಷದ ಮೇಲೆ ಇಲ್ಲಿಗೆ ಬಂದು ತನ್ನನ್ನು ನೋಡಬೇಕೆಂದು ಆನಂದನಿಗೂ ಹೇಳಿದನು ಆ ರಾಕ್ಷಸ. ಇಬ್ಬರೂ ಸಂತೋಷದಿಂದ ತಮ್ಮ ತಮ್ಮ ಗ್ರಾಮಗಳಿಗೆ, ಹೋದರು.

ಒಂದು ವರ್ಷ ಕಳೆದ ಕೂಡಲೇ ವೀರಪ್ಪನು ಗುಡ್ಡದ ಗುಹೆಯ ಬಳಿಗೆಬಂದು ರಾಕ್ಷಸನನ್ನು ನೋಡಿದನು. ಅವನು ರಾಕ್ಷಸನು ಕೊಟ್ಟ ಧನದ ಚೀಲವನ್ನು ಹಾಗೆಯೇ ರಾಕ್ಷಸನ ಪಾದಗಳ ಮುಂದೆ ಇಟ್ಟು, ನಮಸ್ಕಾರ ಮಾಡಿ, "ರಾಕ್ಷಸೋತ್ತಮಾ! ನೀವು ನನ್ನ ಕಣ್ಣು ತೆರೆಸಿದಿರಿ. ಕೈಲಾಗುವ ಯಾವುದೋ ಒಂದು ಕೆಲಸವನ್ನು ಮಾಡುತ್ತ ಬದುಕುವುದರಲ್ಲಿರುವ ಸುಖವು ಗೊತ್ತಾಯಿತು. ಭಿಕ್ಷೆ ಎತ್ತುವುದನ್ನು ಬಿಟ್ಟೆನು. ನನ್ನ ರಟ್ಟೆಗಳ ಆಧಾರದಲ್ಲೇ ದಿನಗಳು ಹಾಯಾಗಿ ಕಳೆಯುತ್ತಾ ಇವೆ. ನೀವು ಕೊಟ್ಟ ಧನದಲ್ಲಿ ಒಂದು ಕಾಸು ಕೂಡಾ ಖರ್ಚು ಮಾಡಲಿಲ್ಲ. ನಿಮ್ಮ ಧನ ನೀವೇ ತೆಗೆದುಕೊಳ್ಳಿ" ಎಂದನು.



ರಾಕ್ಷಸನು ವೀರಪ್ಪನನ್ನು ಮೆಚ್ಚಿಕೊಂಡು ಧನದ ಚೀಲವನ್ನು ಗುಹೆಯೊಳಗೆ ಬಿಸುಟನು.

ಅಷ್ಟರಲ್ಲಿ ಅಲ್ಲಿಗೆ ಆನಂದನು ಬಂದನು. ಅವನ ಹಿಂದೆ ಛಬ್ಬಳು ಸ್ತ್ರೀಯೂ ಇದ್ದಳು. ಅವಳ ಕೊರಳಲ್ಲಿ ಒಂದು ಮಂಗಲ ಸೂತ್ರದ ಹೊರತು ಶರೀರದಲ್ಲಿ ಬೇರೆಯಾವ ನಗಗಳೂ ಇರಲಿಲ್ಲ. ಕೈಗಳಲ್ಲಿ ಗಾಜಿನ ಬಳೆಗಳು ಮಾತ್ರವೇ ಇದ್ದುವು. ಚಿಕ್ಕದೊಂದು ಗಂಟು ಅವಳ ಕೈಯಲ್ಲಿ ಇದ್ದಿತು,

ರಾಕ್ಷಸನೂ ವೀರಪ್ಪನೂ ಅವಳನ್ನು ಆಶ್ಚರ್ಯದಿಂದ ನೋಡುತ್ತಿರಲು, ಆನಂದನು "ಅಯ್ಯಾ, ಇವಳು ನನ್ನ ಹೆಂಡತಿ." ಎಂದು ಹೇಳಿ, ಈ ಮೊದಲು ರಾಕ್ಷಸನು ಕೊಟ್ಟ ಧನದ ಚೀಲವನ್ನು ರಾಕ್ಷಸನ ಕಾಲ ಬುಡದಲ್ಲಿ ಇಟ್ಟನು.

ರಾಕ್ಷಸನು ಕಣ್ಣುಗಳನ್ನು ಕಿಸಿದು, "ಇದೇ ನಿದು ? ಅಷ್ಟೊಂದು ನಗಗಳ ಹುಚ್ಚು ಇರುವ ನಿನ್ನ ಹೆಂಡತಿಯ ಮೈಮೇಲೆ ಯಾವ ನಗವೂ ಇಲ್ಲ! ಇವಳ ನಗಗಳ ಹುಚ್ಚು ಬಿಡಿಸಲಿಕ್ಕೆ ಏನಾದರೂ. ಹಿಂಸೆ ಕೊಟ್ಟೆಯಾ ?" ಎಂದನು.

ಆ ಮಾತಿಗೆ ಆನಂದನು ಉತ್ತರ ಕೊಡ ಬೇಕೆನ್ನುವುದರೊಳಗೆ ಅವನ ಹೆಂಡತಿ, "ನಿಮ್ಮದು ರಾಕ್ಷಸ ರೂಪವಾದರೂ ದೇವತಾ ಗುಣದವರು. ನೀವು ನನ್ನ ಗಂಡ ಈ ಗುಡ್ಡದವರೆಗೆ ಏಕೆ ಬಂದರೆಂಬುದನ್ನೂ, ಇವರಿಗೆ ನೀವು ಹೇಳಿದ ಬುದ್ಧೀ ಮಾತುಗಳನ್ನೂ ಇವರಬಾಯಿಯಿಂದ ತಿಳಿದು ನನ್ನ ಕಣ್ಣು ತೆರೆಯಿತು. ಗಂಡನಿಗೆ ಜೀವನದ ಮೇಲೆಯೇ ವಿರಕ್ತಿ ಬರುವಷ್ಟಿದ್ದ ನನ್ನ ನಗಗಳ ಹುಚ್ಚು ಪೂರ್ತಿ ಬಿಟ್ಟಿತು. ಅದಕ್ಕೆ ಸಾಕ್ಷಿ ನನಗಿದ್ದ ನಗಗಳನ್ನೆಲ್ಲಾ ತಂದು ನಿಮ್ಮ ಮುಂದಿಡುತ್ತೇನೆ. ಇವಾವುದೂ ನನಗೇ ಬೇಡ. ಗಂಡನೇ ನನ್ನ ದೊಡ್ಡ ನಗ!" ಎಂದು ತನ್ನ ಕೈಯಲ್ಲಿದ್ದ ಗಂಟನ್ನು ರಾಕ್ಷಸನ ಮುಂದೆ ಇಟ್ಟಳು.

ರಾಕ್ಷಸನು ಸಂತೋಷದಿಂದ ಗುಡ್ಡವು ನಡುಗುವ ಹಾಗೆ ನಕ್ಕು, ಗುಹೆಯೊಳಗೆ ಹೋಗಿ ವೀರಪ್ಪನ ಚೀಲವನ್ನು ತಂದು ಅವನಿಗೆ ಕೊಟ್ಟು, ಅನಂತನಿಗೂ ಅವನ ಹೆಂಡತಿಗೂ ಅವರ ಚೀಲ, ಗಂಟುಗಳನ್ನು ತೆಗೆದುಕೊಳ್ಳುವಂತೆ ಹೇಳಿ, "ನಿಮ್ಮ ಮೂವರ ಸ್ವಭಾವದಲ್ಲಿಯೂ ಇಷ್ಟು ದೊಡ್ಡ ಮಾರ್ಪಾಡು ಬಂದ ಮೇಲೆ, ಆಧನವೂ ನಗಗಳೂ ನಿಮಗೆ ಯಾವ ಕೆಡುಕೂ ಮಾಡಲಾರವು. ಸತ್ಕಾರ್ಯಗಳಿಗೆ ವಿನಿಯೋಗವಾಗುವುದೆಂದು ನನಗೆ ಗೊತ್ತು. ಇನ್ನು ಹೋಗಿರಿ" ಎಂದನು. ಮೂವರೂ ರಾಕ್ಷಸನಿಗೆ ನಮಸ್ಕಾರ ಮಾಡಿ, ಚೀಲಗಳೊಂದಿಗೆ ತಮ್ಮ ತಮ್ಮ ಮನೆಗಳಿಗೆ ಹೊರಟು ಹೋದರು. ರಾಕ್ಷಸನು ಅಂದುಕೊಂಡಂತೆಯೇ ಅವರಿಬ್ಬರೂ ಮುಂದೆ ಒಳ್ಳೆಯ ರೀತಿಯಲ್ಲಿ ಬದುಕಿದರು.





# ವಿಚಿತ್ರ

ಶ್ರೀಮಂತ ಸುಂದರಿಯರಾದ ಪ್ರಸನ್ನವದನೆಯೂ. ಮೋಹನೆಯೂ ಸಾಲುಸಾಲಾಗಿರುವ ವಿಗ್ರಹಗಳನ್ನು ನೋಡುತ್ತಾ, ಚಿತ್ರಶಾಲೆಯೊಳಗೆಲ್ಲಾ ತಿರುಗಿದರು. ಕಡೆಗೆ ನಿರಾಶೆಯಿಂದ ಹಿಂದಿರುಗುತ್ತಿರಲು, ಹೊರಗೆ ಮಕ್ಕಳು ಮಾಡುವ ಕೋಲಾಹಲವು ಅವರಿಬ್ಬರ ಗಮನವನ್ನು ಸೆಳೆಯಿತು. ಬಿರಬಿರನೆ ಅಲ್ಲಿಗೇ ಹೋದರು.

ಅದನ್ನು ನೋಡಿ ಯಾರೋ ಒಬ್ಬರು, "ಅಲ್ಲಿರುವುದು ಕಡಿಮೆ ತರಗತಿಯ ಬಣ್ಣದ ವಿಗ್ರಹ, ಅಷ್ಟೇ" ಎಂದರು. ಆ ಮಾತು ಇಬ್ಬರು ಸುಂದರಿಯರ ಕಿವಿಗೂ ಬಿದ್ದಿತು.

ಅದನ್ನು ಕೇಳಿ ಮೋಹನೆ ಉತ್ಸಾಹದಿಂದ "ನಡೀ ಅಕ್ಕಾ. ಅದೇನೋ ಕಡಿಮೆ ಬೆಲೆಗೇ ಸಿಗುವ ಹಾಗಿದ್ದರೆ ಒಳ್ಳೇದು ತಾನೆ!" ಎಂದು ಪ್ರಸನ್ನವದನೆಯ ಕೈಯನ್ನು ಹಿಡಿದು ಆ ಕಡೆಗೆ ಕರೆದೊಯ್ದಳು. ಅದನ್ನು ನೋಡಿ ಪ್ರದರ್ಶನಶಾಲೆಯೊಳಗೆ ಒಬ್ಬರೂ ಉಳಿಯದಂತೆ, ಎಲ್ಲರೂ ಕುತೂಹಲದ ಆಕರ್ಷಣೆಗೊಳಗಾದವರಂತೆ ಅವರನ್ನನು ಸರಿಸಿಕೊಂಡು ಹೊರಗೆ ಬಂದರು.

ಪ್ರಸನ್ನವದನೆ ಸರಸರನೆ ಹೋಗಿ ವರಹಗಳ ಚೀಲವನ್ನು ವಿಗ್ರಹದ ಮುಂದೆ ಇಟ್ಟಳು. ಆಮೇಲೆ ತನ್ನ ಕೊರಳಲ್ಲಿರುವ, ಮರಕತ ರತ್ನಗಳ ಹಾರವನ್ನು ತೆಗೆದು, ತಲೆತಗ್ಗಿಸಿ ಕುಳಿತುಕೊಂಡಿದ್ದ ವಿಚಿತ್ರನ ಕೈಯನ್ನು ಹಿಡಿದು ಕಂಕಣ ತೊಡಿಸುವ ಹಾಗೆ ಸುತ್ತಿದಳು.

ಅದನ್ನು ನೋಡಿ ಜನರು. "ಇವರಿಗೇನೋ ಹುಚ್ಚು ಹಿಡಿದಿದೆ. ಪ್ರದರ್ಶನಶಾಲೆಯೊಳಗಿನ ಮಹಾ ಮಹಾ ವಿಗ್ರಹಗಳನ್ನು ಬಿಟ್ಟು, ಇದರ ಮುಂದೆ ಹಣ ಸುರಿಯುತ್ತಿದ್ದಾರೆ!" ಎಂದರು.

ಪ್ರಸನ್ನವದನೆ ಆ ಮಾತು ಹೇಳಿದವರನ್ನು ನೋಡಿ, "ಇಲ್ಲಿರುವ ಈ ವಿಗ್ರಹದಲ್ಲಿ ಯಾವ ವಿಶೇಷವನ್ನು ನೋಡಿ ಬಾಲಬಾಲಕಿಯರೆಲ್ಲಾ ಆನಂದಪಡುತ್ತಿದ್ದಾರೋ ಆ ವಿಶೇಷವೇ ನಮ್ಮನ್ನು ಮುಗ್ಧಗೊಳಿಸಿತು. ಬಾಲರ ಮೆಚ್ಚುಗೆಯೇ ಬ್ರಹ್ಮನ

೩೪. ಮಹಾಭಾರತ ರಚನೆ



ಮೆಚ್ಚುಗೆ. ಬಾಲರು ದೇವರಿಗೆ ಸಮಾನರೆಂದು ಹೇಳುತ್ತಾರಲ್ಲವೆ? ಆದುದರಿಂದಲೇ ಅವರ ಆರಿಕೆಯನ್ನೇ ಶ್ರೇಷ್ಠವೆಂದುಕೊಂಡು ನಾವು ಶಿರಸಾ ವಹಿಸಿಕೊಂಡೆವು." ಎಂದಳು.

"ಕೇವಲ ಮಣ್ಣಿನ ಶಿಲ್ಪದಲ್ಲಿ ಎಲ್ಲಿಲ್ಲದ ಸೌಂದರ್ಯವನ್ನೂ, ಅಮೋಘತೆಯನ್ನೂ, ಜೇಡಿ, ಸುಣ್ಣ, ಮಸಿ, ಅರಸಿನ, ಕುಂಕುಮಗಳಿಂದಲೇ ಮೂಡಿಸಿ, ಮೂರ್ತಿಮಂತವಾಗುವಂತೆ ತಿದ್ದಿ ತೀಡಿದ ಈ ಬಾಲ ಚಿತ್ರಕಾರನ ಪ್ರತಿಭೆ ಅತ್ಯಮೋಘ ವಾಗಿದೆ. ನಾವು ಕೊಡುವ ಬಹುಮಾನವು ಅತ್ಯಲ್ಪ" ಎಂದಳು ಮೋಹನೆ.

ಆ ಸಮಯದಲ್ಲಿ ವಿಚಿತ್ರನ ವೃದ್ಧ ಜನನೀ ಜನಕರು ಅಲ್ಲಿಗೆ ಅಕಸ್ಮಾತ್ತಾಗಿ ಬಂದರು.

"ಕಂದಾ, ಪಾವನಾ! ವಾತಾಪೀಗಣಪತಿಯ ಕೃಪೆಯಿಂದ ನಮ್ಮ ಅನ್ವೇಷಣೆ ಫಲಿಸಿತು. ಮನೆ ಬಿಟ್ಟು ಹೋದ ಮೇಲೆ ನಿನ್ನನ್ನು ಎಲ್ಲೆಲ್ಲೋ ಹುಡುಕಿದೆವು. ಇಷ್ಟು ದೊಡ್ಡವನಾಗಿ ನಮ್ಮ ಕಣ್ಣಿಗೆ ಬಿದ್ದು ಅತ್ಯಾನಂದಪಡಿಸಿದಿ! ನಿನ್ನನ್ನು ಪಡೆದ ನಮ್ಮ ಜನ್ಮ ಸಾರ್ಥಕವಾಯಿತು." ಎಂದು ತಂದೆತಾಯಿಯರು ಕುಮಾರನನ್ನು ಆಲಿಂಗಿಸಿ ಕೊಂಡು ಆನಂದಭಾಷ್ಪ ಸುರಿಸಿದರು.

ಆಗ ವಿಚಿತ್ರನು ಬಾಲ್ಯದಿಂದ ತಾರುಣ್ಯಕ್ಕೆ ಕಾಲಿಟ್ಟಿದ್ದನು. ತಂದೆತಾಯಿಯರನ್ನು ನೋಡಿ ಅವನಿಗಾದ ಆನಂದ ಅಷ್ಟಿಷ್ಟಲ್ಲ. ಹಿಂದಿನ ಸಂಗತಿ ಗಳೆಲ್ಲಾ ಅವನ ನೆನಪಿಗೆ ಬಂದುವು. ತನ್ನ ನಿಜವಾದ ಹೆಸರು ಏನೆಂಬುದೂ ಅವನಿಗೆ ಈಗ ತಿಳಿಯಿತು.

ತಾಯಿತಂದೆ ಮಗಂದಿರ ಈ ಸಮಾಗಮವನ್ನು ನೋಡಿ ಪ್ರಸನ್ನವದನೆ ಅತ್ಯಂತ ತೃಪ್ತಿಯಿಂದ, "ಈಗ ತಾನೇ ನಮ್ಮ ಕೋರಿಕೆ ನೆರವೇರಿತು. ಇನ್ನು ನಾವು ಸಂತೃಪ್ತಿಯಿಂದ ನಮ್ಮ ಹರಕೆ ಸಲಿಸ ಬಹುದು. ಈಗಲೇ ಇಲ್ಲಿಯೇ ಅದನ್ನೂ ಸಲಿಸಿ ಬಿಡುತ್ತೇವೆ" ಎಂದಳು ಗೆಜ್ಜೆಯ ಕಾಲುಗಳನ್ನು ಝುಣತ್ಕರಿಸುತ್ತ.

ಕೆಲವೇ ನಿಮಿಷಗಳಲ್ಲಿ ಅಲ್ಲಿ ಕೂಡಿದ ಜನರು ಅಲಂಕಾರ ಚಪ್ಪರವನ್ನೆಬ್ಬಿಸಿ, ಭವ್ಯವಾದ ವೇದಿಕೆ ಯನ್ನು ನಿರ್ಮಿಸಿಬಿಟ್ಟರು. ಪ್ರಸನ್ನವದನೆ ವಿನಾಯಕ ವಿಗ್ರಹವನ್ನು ಅಂಟಿಕೊಂಡಂತೆ ಕುಳಿತು ತಾಳ ಗಳನ್ನು ಬಾರಿಸುತ್ತ "ತಾಂಡವ ನೃತ್ಯಕರೀ ಗಜಾನನ......" ಎಂದು ಕೀರ್ತನೆಯನ್ನು ಪ್ರಾರಂಭಿ ಸಿದಳು. ಆ ಧ್ವನಿಯಿಂದ ನಾಲ್ಕು ಸುತ್ತಲೂ ಸೇರಿದ ಜನರೆಲ್ಲ ನಿಶ್ಶಬ್ದರಾದರು.

ವೇದಿಕೆಯ ಮೇಲೆ ಮೋಹನೆ ವಿದ್ಯುಲ್ಲತೆಯ ಹಾಗೆ ನೃತ್ಯಮಾಡುತ್ತಿರಲು, ಜನರು ಆನಂದ ತರಂಗಗಳಿಂದ ಪರವಶರಾಗಿ ಓಲಾಡತೊಡಗಿದರು.

ಪ್ರಸನ್ನವದನೆಯ ಗಾನವು ಗಜಾನನ ಪಂಡಿತನ ಕಿವಿಗೂ ಕೇಳಿಸಿತು. ಆಗ ಗಜಾನನ ಪಂಡಿತನು ಶತಾಧಿಕ ವೃದ್ಧನಾಗಿ ಮನೆಬಿಟ್ಟು ಕದಲಲಾಗದ

ಸ್ಥಿತಿಯಲ್ಲಿದ್ದನು. ಅಂತಹವನಿಗೆ ಎಲ್ಲಿಲ್ಲದ ಶಕ್ತಿ ಸತ್ವದೊಂದಿಗೆ ಕುತೂಹಲವೆದ್ದಿತು. ಅವನು ಓಡು ನಡಿಗೆಯಿಂದ ಚಪ್ಪರದ ವರೆಗೆ ಬಂದು, ಪ್ರಸನ್ನ ವದನೆಯನ್ನು ನೋಡಿ, ಕೈಗಳನ್ನೆತ್ತಿ ಜೋಡಿಸಿ ಸಾಷ್ಟಾಂಗವಾಗಿ ಬಿದ್ದು ಹಾಗೆಯೇ ಧ್ಯಾನಮುದ್ರೆಯಲ್ಲಿ ಇದ್ದುಬಿಟ್ಟನು.

ಮೋಹನೆ ನೃತ್ಯಮಾಡುತ್ತ ಮಾಡುತ್ತ, ವಿಚಿತ್ರನು ಮಾಡಿಟ್ಟ ದೊಡ್ಡದಾದ ವಿಗ್ರಹವನ್ನು ಅವಲೀಲೆಯಾಗಿ ಎತ್ತಿ ಹೆಗಲಿನ ಮೇಲೆ ಇಟ್ಟುಕೊಂಡಳು. ಅದನ್ನು ನೋಡಿ ಎಚ್ಚೆತ್ತುಕೊಂಡ ಜನರು "ಅಷ್ಟು ಭಾರ ಹೊರಲು ನಿನ್ನಿಂದಾಗದಮ್ಮಾ!" ಎಂದು ಕೂಗಿದರು.

ಅದಕ್ಕೆ ಉತ್ತರವಾಗಿ ಮೋಹನೆ "ನನಗೆ ಇದನ್ನು ಹೊತ್ತು, ಹೊತ್ತು, ಅಭ್ಯಾಸ ತಾನೇ!" ಎಂದಳು ನಗುತ್ತಾ. ಹಾಗೆ ಅವಳು ಆ ವಿಗ್ರಹವನ್ನು ಹೊತ್ತುಕೊಂಡು ನಾಟ್ಯದ ನಡಿಗೆಯಲ್ಲಿಯೇ ಹೊರಟಳು. ಜನರು ಕೂಡಾ ಮಂತ್ರಮುಗ್ಧರಾಗಿ ಅವಳ ಹಿಂದೆಯೇ ಹೊರಟರು. ಆ ಗಲಾಟೆಯಲ್ಲಿ ಯಾವಾಗಲೋ ಮಾಯವಾಗಿ ಹೋದ ಪ್ರಸನ್ನ ವದನೆಯನ್ನು ಯಾರೂ ಗಮನಿಸಲಿಲ್ಲ.

ಧ್ಯಾನಮುದ್ರೆಯಲ್ಲಿದ್ದ ಗಜಾನನ ಪಂಡಿತನು ಕಣ್ಣು ತೆರೆದನು. ಇದಿರಿನಲ್ಲಿ ವಿಗ್ರಹವಿದ್ದ ಜಾಗದಲ್ಲಿ ವರಹಗಳಿಂದ ತುಂಬಿ ಹೊಳೆಯುವ ಬಂಗಾರದ ಜರತಾರೀ ಚೀಲವಿರುವುದನ್ನು ನೋಡಿದನು. ಆತನ ಪಾದ ಪ್ರದೇಶದಲ್ಲಿ ಕೈಮುಗಿದು ವಿನೀತನಾಗಿ ಕುಳಿತಿದ್ದ ವಿಚಿತ್ರನನ್ನು ನೋಡಿ "ನೋಡಿದೆಯಾ ಕಂದಾ! ಆಲಯದ ಮಂಟಪ, ಕಂಬ ಗೋಡೆಗಳಲ್ಲೆಲ್ಲಾ ಗಣೇಶಲೀಲೆಯ ಚಿತ್ರಗಳನ್ನು ರಚಿಸಿ ಶೋಭಾಯಮಾನ ಮಾಡು. ಅದಕ್ಕೆ ಬೇಕಾದ ಧನವನ್ನು ಪ್ರಸನ್ನವದನನಾದ ವಿಘ್ನೇಶ್ವರನೇ ನಿನಗೆ ಒದಗಿಸಿದ್ದಾನೆ ನೋಡು!" ಎಂದು ಹೇಳಿ ಎದ್ದನು.



ಗಜಾನನ ಪಂಡಿತನೂ. ವಿಚಿತ್ರನೂ ಮೆರವಣಿಗೆಯಾಗಿ ಹೋಗುತ್ತಿರುವ ಜನರೊಂದಿಗೆ ಕೂಡಿದರು.

ಮೋಹನೆ ವಿಗ್ರಹವನ್ನು ಹೊತ್ತುಕೊಂಡು ಆಲಯದ ಪುಷ್ಕರಣಿಯ ಬದಿಗೆ ಹೋದಳು. ಮೆಟ್ಟಿಲುಗಳನ್ನು ಇಳಿಯುತ್ತಾ ಒಮ್ಮಿಂದೊಮ್ಮೆಗೇ ಮಾಯವಾದಳು. ಅವಳಿಗೆ ಬದಲಾಗಿ ಇಲಿಯೊಂದು ಗಣೇಶ ವಿಗ್ರಹವನ್ನು ಹೊತ್ತುಕೊಂಡು ನೀರಿನ ಮೇಲೆ ಓಡಿ ಮುಳುಗಿ ಮಾಯವಾಯಿತು. ಆ ದಿನವೇ ವಿಘ್ನೇಶ ವಿಗ್ರಹವನ್ನು ಜಲವಿಸರ್ಜನ ಮಾಡುವ ಪರ್ವದಿನವಾಗಿತ್ತು.

ಇಲಿ ವಿಗ್ರಹದೊಂದಿಗೆ ಮುಳುಗಿದ ಜಾಗದಲ್ಲಿ ಕೋಟಿ ಪೂರ್ಣಿಮೆಯ ಬೆಳುದಿಂಗಳ ಪ್ರಕಾಶವು ಬೆಳಗಿತ್ತು. ಆ ಕಾಂತಿಯಲ್ಲಿ ಅಭಯಹಸ್ತದಿಂದ ಆಶೀರ್ವಾದ ತೋರುವ ವಿಘ್ನೇಶ್ವರನು ಸಾಕ್ಷಾತ್ಕಾರನಾಗಿ ಎಲ್ಲರಿಗೂ ಒಮ್ಮೆ ತೋರಿ, ಮರುಕ್ಷಣವೇ ಅಂತರ್ಧಾನನಾದನು.



ಗಜಾನನ ಪಂಡಿತನು ವಿಚಿತ್ರನನ್ನು ಗಾಢಾಲಿಂಗನ ಮಾಡಿ. "ಕಂದಾ, ಪಾವನಾ ! ನಿನ್ನ ಮೂಲಕವಾಗಿ ವಾತಾಪಿ ನಗರಕ್ಕೆ ಪಾವನತೆ ಪ್ರಾಪ್ತವಾಯಿತು. ಇನ್ನು ನಿನ್ನನ್ನು ಪಾವನ ಮಿತ್ರನೆಂದು ಕರೆಯುತ್ತೇನೆ." ಎಂದನು.

ಹೀಗೆ ಪಾವನ ಮಿತ್ರನು ಕಥೆಯನ್ನು ಹೇಳುತ್ತ ಮುಂದುವರಿಸಿ, "ಗರ್ಭಾಲಯ ಮುಖದ್ವಾರದ ಮೇಲೆ ಮಹಾಭಾರತ ರಚನೆಯ ಗಣಪತಿ..." ಎನ್ನುವುದನ್ನು ಕೇಳಿದ ಕೂಡಲೇ ಯುವಚಿತ್ರಕಾರನು ಪಾವನ ಮಿತ್ರನ ಪಾದಗಳನ್ನು ಬಿಗಿ ಹಿಡಿದುಕೊಂಡು, "ಗುರುದೇವಾ ! ನಿಮ್ಮ ಪಾವನ ಚರಿತ್ರೆಯನ್ನು ಕೇಳಿ ನಾನು ಧನ್ಯನಾದೆನು. ನನ್ನ ಹೆಸರು ಆನಂದನೆಂದು. ನಿಮ್ಮ ಪಾವನ ನಾಮಾಕ್ಷರಗಳಲ್ಲಿರುವ ಮೊದಲನೆಯ ಎರಡು ಅಕ್ಷರಗಳನ್ನು ಬದಲಿಸಿ ನನ್ನ ಹೆಸರಿನ ಮುಂದೆ ಸೇರಿಸಿ 'ವಪಾನಂದ' ಅನಿಸಿಕೊಳ್ಳಲು ಅನುಮತಿ ನೀಡಬೇಕು. ಈ ಆಲಯ ಮಂಟಪವು ಪಾವನ ಚಿತ್ರಾಲಯವಾಗಿದೆ. ಈ ಪಾವನ ಮಂಟಪದ ಚಿತ್ರಗಳಿಗೆ ನಾನು ಪ್ರತಿಕೃತಿಗಳನ್ನು ರಚಿಸುತ್ತೇನೆ. ಮುಂದಿನ ಪರಿಗಾಗಿ ನೀವು ಹೇಳಿದ ಕಥೆಗಳನ್ನೆಲ್ಲಾ ಹೇಳುತ್ತೇನೆ. ಅನುಗ್ರಹಿಸಿರಿ ಗುರೂ !" ಎಂದು ತಲೆಬಾಗಿದನು.

ಹೊಳೆಯುವ ಬೆಳ್ಳಿಯ ಕೂದಲುಗಳಿಂದ, ನಿರಿಗೆ ಬಿದ್ದ ವಿಶಾಲ ಫಾಲದಿಂದ, ವಾರ್ಧಕ್ಯವು ಮೇಲೆ ಬಿದ್ದರೂ ಮನಸ್ಸಿಗೆ ವಾರ್ಧಕ್ಯವನ್ನು ಮುಟ್ಟಲು ಬಿಡದ ಪಾವನ ಮಿತ್ರನು, ಮಂದಹಾಸ ಬೆಳಗಿಸಿ ಮತ್ತೆ ಹೇಳತೊಡಗಿದನು.

ಭಗವಾನ್ ವ್ಯಾಸನು ತಾನು ಹೇಳುವಂತಹ ಮಹಾಭಾರತವನ್ನು ಬರೆಯಬಲ್ಲ ಸಮರ್ಥ ಲೇಖಕನು ಯಾರೆಂದು ಆಲೋಚಿಸುತ್ತಿದ್ದನು. ಅದನ್ನು ತಿಳಿದು ಬ್ರಹ್ಮನು ಅವನ ಮುಂದೆ ಸಾಕ್ಷಾತ್ಕರಿಸಿ, ವಿಘ್ನೇಶ್ವರನನ್ನು ಲೇಖಕನಾಗಿ ಇಟ್ಟುಕೊಳ್ಳುವಂತೆ ಸೂಚಿಸಿ ಮಾಯವಾದನು.

ಬ್ರಹ್ಮದೇವನ ಆದೇಶದಂತೆ ವ್ಯಾಸನು ವಿಘ್ನೇಶ್ವರನನ್ನು ಧ್ಯಾನಿಸುತ್ತ ಪ್ರಾರ್ಥಿಸತೊಡಗಿದನು.

ವಿಘ್ನೇಶ್ವರನು ಪ್ರಸನ್ನನಾಗಿ ವ್ಯಾಸನ ಮುಂದೆ ಪ್ರತ್ಯಕ್ಷನಾಗಿ, "ಅಯ್ಯಾ, ವ್ಯಾಸಮಹರ್ಷಿ ! ಮಹಾಭಾರತವನ್ನು ಪೂರ್ತಿ ಯೋಚಿಸಿ ನಿನ್ನ ಪಾಡಿಗೆ ಹೇಳಿಕೊಂಡು ಹೋಗಬೇಕೇ ಹೊರತು ನನ್ನ ಕಡೆಗೆ ನೋಡಕೂಡದು" ಎಂದು ಹೇಳಿ ಬರೆಯಲು ಕುಳಿತೇಬಿಟ್ಟನು.

ವಿಘ್ನೇಶ್ವರನು ತನ್ನ ದಂತದ ತುಂಡನ್ನು ಕಂಠವಾಗಿ ಹಿಡಿದುಕೊಂಡು, ತಾಲಪತ್ರದ ಮೇಲೆ ತಾಗಿಸಿದ ಅದರ ಮೊನೆಯನ್ನು ಎತ್ತದೆ ಬರೆಯುತ್ತಾ ಹೋಗುತ್ತಿರಲು, ವ್ಯಾಸನು ಅರ್ಧನಿಮೀಲಿತ ನೇತ್ರಗಳಿಂದ ಧ್ಯಾನಮಾಡುತ್ತ, ತುಟಿಯಲುಗಿಸಿಕೊಂಡು ನಿರ್ವಿರಾಮವಾಗಿ ಹೇಳುತ್ತಾ ಹೋದನು.



ಅವರ ಇದಿರಿನಲ್ಲಿ ಹಿಮಾಲಯ ಶಿಖರಗಳಿದ್ದುವು. ಒಂದು ಹಿಮಶಿಖರಾಗ್ರದಿಂದ ಬೀಳುತ್ತಿದ್ದ ಜಲಪಾತವು ಮಧ್ಯಮಾವತಿ ರಾಗಾಲಾಪನೆಯ ಮಂದ್ರ ಗಂಭೀರ ಧ್ವನಿ ನೇಪಥ್ಯ ಶ್ರುತಿಯಾಗಿ ಹೊರಡುತಿತ್ತು. ದೇವದಾರು ವೃಕ್ಷಗಳ ವನವು ತಲೆಯಾಡಿಸುತ್ತಿದ್ದಿತು. ಜಲ ಜಲನೆ ಹರಿಯುವ ನದಿಗಳ ಅನಂತ ರಾಗಮಾಲಿಕೆಗಳು ಆನಂದಲಹರಿಯಂತಾದುವು. ಮಹಾಭಾರತ ರಚನೆ ಧಾರಾವಾಹಿಯಾಗಿ ನಿರ್ವಿರಾಮವಾಗಿ ಸಾಗುತ್ತಿದ್ದಿತು.

ಹುಟ್ಟುಗುರುಡನಾದ ಧೃತರಾಷ್ಟ್ರನು ಹಸ್ತಿನಾಪುರದ ಸಿಂಹಾಸನವನ್ನು ಅಲಂಕರಿಸಿದನು. ಅವನ ತಮ್ಮ ಪಾಂಡು ರಾಜನು ಸಾಮ್ರಾಜ್ಯಪಾಲನೆ ಹೊತ್ತುಕೊಂಡು ತುಂಬಾ ವಿಸ್ತರಿಸಿದನು. ಪಾಂಡುರಾಜನಿಗೆ ಪಂಚಪಾಂಡವರೂ, ಧೃತರಾಷ್ಟ್ರನಿಗೆ ನೂರು ಮಂದಿ ಕೌರವರೂ ಪುತ್ರರಾದರು.

ಚಿಕ್ಕಂದಿನಿಂದಲೇ ಕೌರವ ಪಾಂಡವರ ನಡುವೆ ಇದ್ದ ಅಸೂಯೆ ವರ್ಧಿಸಿಕೊಂಡೇ ಹೋಯಿತು. ವ್ಯಾಸನು ಹೇಳುತ್ತಿರಲು, ವಿಘ್ನೇಶ್ವರನು ಬರೆಯುತ್ತಿರಲು, ಸಭಾಪರ್ವವು ಸಾಗತೊಡಗಿತು.

ಮಯ ಸಭೆಯಲ್ಲಿ ಪರಾಭವಗೊಂಡು ಅವಮಾನಿತನಾದ ದುರ್ಯೋಧನನು, ಪ್ರತೀಕಾರವಾಗಿ ಪಾಂಡವರನ್ನೂ, ಅವರ ಹೆಂಡತಿ ದ್ರೌಪದಿಯನ್ನೂ ಜೂಜಾಟದಲ್ಲಿ ಗೆದ್ದುಕೊಂಡು, ದ್ರೌಪದಿಯ ವಸ್ತ್ರಾಪಹರಣ ಮಾಡಿಸುವಾಗ, ಭೀಮನು ದುರ್ಯೋಧನನ ತೊಡೆಗಳನ್ನು ಒಡೆಯುವೆನೆಂದು, ದುಶ್ಶಾಸನನ ರಕ್ತವನ್ನು ಕುಡಿಯುವೆನೆಂದು ಸಿಂಹಗರ್ಜನೆ ಮಾಡಿದನು.

ಪಾಂಡವರು ಜೂಜಿನ ನಿಯಮದಂತೆ ವನವಾಸಕ್ಕೆ ಹೋದರು. ಅದನ್ನು ಮುಗಿಸಿ ವಿರಾಟರಾಜನ ಆಸ್ಥಾನದಲ್ಲಿ ಅಜ್ಞಾತವಾಸಕ್ಕೆ ತೊಡಗಿದರು. ಸೈರಂಧ್ರಿಯಾಗಿದ್ದ ದ್ರೌಪದಿಯನ್ನು ಕೀಚಕನು ಅವಮಾನಿಸಿ, ಭೀಮನ ಕೈಯಲ್ಲಿ ಮುದ್ದೆಯಾಗಿ ಬಿದ್ದನು. ಉತ್ತರಗೋಗ್ರಹಣದಲ್ಲಿ ಬೃಹನ್ನಳೆ ವಿಜಯಿಯಾಗಿ, ಕೌರವಸೇನೆಯ ಧೂಳು ಹಾರಿಸಿದನು. ಮಹಾಭಾರತದಲ್ಲಿ ಸುಂದರಕಾಂಡವಾಗಿ ವಿರಾಟಪರ್ವವು ಸಾಗಿತು.

ಹಿಮಗಿರಿ ಜಲಪಾತವು ಕಲ್ಯಾಣೀರಾಗಕ್ಕೆ ತಿರುಗಿತು. ಅಭಿಮನ್ಯುವಿಗೆ ಉತ್ತರೆಯೊಂದಿಗೆ ವಿವಾಹವಾಯಿತು. ಭಗವಾನ್ ಕೃಷ್ಣನು ರಾಯಭಾರವನ್ನು ಕೈಕೊಂಡು, ಪಾಂಡವರಿಗೆ ಐದು ಊರುಗಳನ್ನು ಕೊಟ್ಟರೆ ಸಾಕೆಂದು ಹೇಳಿದನು. ದುರ್ಯೋಧನನು ಸೂಜಿಮೊನೆಯ ಸ್ಥಳವನ್ನು ಕೂಡಾ ಕೊಡಲಾರೆನೆಂದು ಹೇಳಿಬಿಟ್ಟನು.

ಯುದ್ಧವು ಅನಿವಾರ್ಯವಾಯಿತು.-ಹಿಮಾಲಯದ ಝರಿ ಕದನ ಕುತೂಹಲ ರಾಗವನ್ನು ಹಿಡಿಯಿತು. ಹಿಮ ಶಿಖರಗಳು ಜರಿದು ಬೀಳುತ್ತಿವೆಯೋ ಎಂಬಂತೆ ತೋರಿತು. ಹಿಮಾನೀ ನದಿಗಳು ಕುದುರೆಗಳ ಹಾಗೆ ದೌಡಾಯಿಸತೊಡಗಿದುವು.



ಕೃಷ್ಣನು ಅರ್ಜುನನಿಗೆ ರಥಸಾರಥಿಯಾದನು. ಅವನು ಅರ್ಜುನನಿಗೆ ಉಪದೇಶಿಸಿದ ನುಡಿಮುತ್ತುಗಳು ಭಗವದ್ಗೀತೆಯಾದುವು. ಜಲಪಾತವು ಸಾಮ, ಸೌರಾಷ್ಟ್ರ, ದೇವಗಾಂಧಾರ ರಾಗಗಳನ್ನು ಶ್ರುತಿಸಿಕೊಂಡಿದ್ದಿತು.

ಭೀಷ್ಮನು ಶರಶಯ್ಯೆಯಲ್ಲಿ ವಿಶ್ರಮಿಸಿದನು. ದ್ರೋಣನು ಪದ್ಮವ್ಯೂಹವನ್ನು ರಚಿಸಿದನು. ಹತ್ತು ಮಂದಿ ಸೇರಿದ ಹೊರತು ಅಭಿಮನ್ಯುವನ್ನು ಕೊಲ್ಲಲಾಗಲಿಲ್ಲ. ಸುಭದ್ರೆಯ ಪುತ್ರಶೋಕದಂತೆ ಜಲಪಾತವು ಮುಖಾರಿ ರಾಗವನ್ನು ಸೂಸಿತು.

ಅರ್ಜುನನು ಕೋಪೋದ್ರೇಕದಿಂದ ವಿಜೃಂಭಿಸಿದನು: ಧೃಷ್ಟದ್ಯುಮ್ನನಿಂದ ದ್ರೋಣನ ಅಂತ್ಯವಾಯಿತು. ಅನೇಕ ಅಂತರಾಯಗಳಿಂದ ನಿರ್ಬಂಧಿಸಲ್ಪಟ್ಟ ಕರ್ಣನನ್ನು ಕೊಂದ ಮೇಲೆ, ಅವನನ್ನೇ ನಂಬಿದ್ದ ದುರ್ಯೋಧನನು ಪೂರ್ತಿ ಏಕಾಂಗಿಯಂತಾದನು. ಭೀಮನು ದುಶ್ಶಾಸನನ್ನು ಕೊಂದು, ದುರ್ಯೋಧನನ ತೊಡೆಗಳನ್ನು ಗದಾಘಾತದಿಂದ ಮುರಿದು ಹಾಕಿದನು..

ಜೂಜಾಟದಲ್ಲಿ ಸೋತು ಹೋದ ಧರ್ಮರಾಜನು, ತಮ್ಮಂದಿರೊಂದಿಗೆ ವಿಜಯದುಂದುಭಿಯನ್ನು ಮೊಳಗಿಸಿದನು.

ಕೃಷ್ಣನು ತನ್ನ ಅವತಾರವನ್ನು ಮುಗಿಸಿದನು. ಪಾಂಡವರು ಪರೀಕ್ಷಿತನಿಗೆ ಪಟ್ಟಕಟ್ಟಿ, ದ್ರೌಪದಿಯೊಂದಿಗೆ ಮಹಾಪ್ರಸ್ಥಾನಕ್ಕೆ ಹೊರಟರು.

ಧರ್ಮಕ್ಕೆ ಸಾವಿಲ್ಲವೆಂದು, ಕಡೆಗೆ ನಿಲ್ಲುವುದು ಧರ್ಮವೇ ಎಂದು ಜಗತ್ತಿಗೆ ಎತ್ತಿ ತೋರಿಸುವಂತೆ ಧರ್ಮರಾಜನು ಮಹಾ ಮೇರುವಿನ ಶಿಖರಾಗ್ರದಲ್ಲಿ ನಿಂತುಕೊಂಡನು. ಆಗ ಸುತ್ತುಮುತ್ತಲೂ ಒಂದು ಬಗೆಯ ಶಾಂತತೆ ಹರಡುತ್ತಾ, ಜಲಪಾತದ ಧ್ವನಿ ಕ್ಷೀಣಿಸುತ್ತಾ ಬಂದಿತು. ನೋಡ ನೋಡುತ್ತಿರಲು, ಸುತ್ತುಮುತ್ತಲೂ ಗಂಭೀರ ನಿಶ್ಶಬ್ದವು ತುಂಬಿಕೊಂಡಿತು. ವ್ಯಾಸನು ಹೇಳುವುದನ್ನು ವಿಘ್ನೇಶ್ವರನು ಬರೆಯುತ್ತಿರುವನೋ ಅಥವಾ ವಿಘ್ನೇಶ್ವರನು ಬರೆಯುವುದನ್ನು ವ್ಯಾಸನು ಓದುತ್ತಿದ್ದಾನೋ ಎಂಬ ಹಾಗೆ ಚಕಚಕನೆ ಮಹಾಭಾರತದ ರಚನೆಯಾಯಿತು.

ಸತ್ಯಲೋಕದಲ್ಲಿ ಪದ್ಮಾಸನಸ್ಥನಾಗಿದ್ದ ಬ್ರಹ್ಮದೇವನು ಸಂತೃಪ್ತನಾಗಿ ಕಿರುನಗು ಸೂಸುತ್ತ ಸರಸ್ವತಿಯನ್ನು ನೋಡಿ ತಲೆಯೊಲಿದನು. ಅದನ್ನು ಅರ್ಥಮಾಡಿಕೊಂಡ ಸರಸ್ವತಿ ವೀಣೆಯನ್ನು ಮೀಂಟುತ್ತ ಶ್ರೀ ರಾಗವನ್ನು ಹೊರಡಿಸಿದಳು.

ಮಹಾಭಾರತವು ಮುಗಿಯುತ್ತಾ ಬರುತ್ತಿದೆ. ಕೊನೆಯ. ಪರ್ವವು ಸಾಗುತ್ತಿದೆ. ಸರಸ್ವತೀದೇವಿ ಸತ್ಯಲೋಕದಿಂದ ಮಂಗಳಾಚರಣೆಯಾಗಿ ಆಲಾಪಿಸುವ ಶ್ರೀರಾಗದ ವೀಣಾನಾದವು ತಾನು ಹೇಳುವ ಕಥೆಗೆ ಅಂತರಾಯವೆನಿಸುವಂತೆ ವ್ಯಾಸನ ಕಿವಿಯೊಳಗೆ ಝೇಂಕರಿಸತೊಡಗಿತು.

ಇನ್ನೂ ಹೇಳಬೇಕಾದುದು ಎಷ್ಟೋ ಇದೆ. ವ್ಯಾಸನು ಕ್ಷಣಮಾತ್ರ ತಡೆದು ಕಣ್ಣು ಬಿಡಿಸಿ ಲೇಖಕನನ್ನು ನೋಡಿದನು. ಮರುಕ್ಷಣದಲ್ಲಿ ವಿಘ್ನೇಶ್ವರನು ಕಾಣಲಿಲ್ಲ, ಆಗಲೇ ಅಂತರ್ಧಾನನಾಗಿ ಬಿಟ್ಟಿದ್ದನು.

ಅಲ್ಲಿ ಬರೆದು ಅಣಿಯಾಗಿಟ್ಟಿದ್ದ ಮಹಾಭಾರತ ಗ್ರಂಥದ ಮೇಲೆ ಆಕಾಶದಿಂದ ಅಕ್ಷತೆಗಳು ಬೀಳುವಂತೆ, ಪುಷ್ಪಗಳು ಜಲಜಲನೆ ಉದುರಿದುವು.

ವ್ಯಾಸನು ಆತ್ಯಾತುರದಿಂದ ಗ್ರಂಥಗಳನ್ನು ಬಿಡಿಸಿ ಪರಿಶೀಲಿಸಿ ನೋಡಿದನು. ತಾನಿನ್ನೂ ಹೇಳಬೇಕಾದದನ್ನು ಕೂಡಾ ಒಂದಕ್ಷರವನ್ನೂ ಬಿಡದೆ ಸಂಪೂರ್ಣವಾಗಿ ಬರೆಯಲ್ಪಟ್ಟಿದ್ದಿತು !

ವ್ಯಾಸನು ಆನಂದಾಶ್ಚರ್ಯಗಳಿಂದ ಗಣೇಶನಿಗೆ ಮಾನಸಿಕವಾಗಿ ನಮಸ್ಕರಿಸಿಕೊಂಡಿರಲು, ಮಹತೀ ವೀಣೆಯಿಂದ ಹೊರಡುವ ಹಂಸಧ್ವನಿರಾಗವು ಕೇಳತೊಡಗಿತು. ಅಲ್ಲಿಗೆ ಬಂದ ನಾರದನು, "ಏನಿದು ಮಹಾಭಾರತ ಮಹರ್ಷೇ ! ಆಶ್ಚರ್ಯದಿಂದ ಪರವಶನಾದಂತಿದೆಯಲ್ಲಾ !" ಎಂದನು.

ವ್ಯಾಸನು ನಡೆದ ಸಂಗತಿಯನ್ನು ನಾರದನೊಂದಿಗೆ ಹೇಳಿದನು.

"ಅಂದರೆ ನೀನು ಹೇಳುವುದನ್ನು ಹೇಳುವ ಮೊದಲೇ ನಿನ್ನ ಲೇಖಕನು ಬರೆದಿದ್ದಾನೆಂದಾಯಿತು. ಅವನು ನಿನ್ನ ಮನಸ್ಸಿನೊಳಗೇ ಹೊಕ್ಕಿರುವನೆಂದಾಯಿತು." ಎಂದನು ನಾರದ.

"ಹೌದು, ನಾರದಾ, ಹಾಗೆಯೇ ನಡೆದಿದೆ. ಅಂತಹ ಲೇಖಕನು ಎಂತಹ ತಪಸ್ಸು ಮಾಡಿದರೂ ದೊರೆಯಲಾರನು. ನಾನು ಧನ್ಯನಾದೆ ! ನನ್ನ ಸಂಕಲ್ಪವು ಜಯಪ್ರದವಾಯಿತು. ಈ ಮಹಾಭಾರತವನ್ನು 'ಜಯ' ಎಂಬ ಹೆಸರಿನಿಂದಲೂ ಕರೆಯುತ್ತೇನೆ." ಎಂದು ಹೇಳಿ ವ್ಯಾಸನು ಮತ್ತೆ ವಿಘ್ನೇಶ್ವರನನ್ನು ಧ್ಯಾನಿಸಿದನು.

ಮಹಾಭಾರತ ಗ್ರಂಥಗಳ ಹತ್ತಿರ ದೊಡ್ಡದೊಂದು ಜ್ಯೋತಿ ಬೆಳಗುವುದು ಕಂಡಿತು. ಆ ಜ್ಯೋತಿ ವಿಘ್ನೇಶ್ವರನ ಆಕಾರವಾಗಿ ಮಾರ್ಪಟ್ಟಿತು. ಹೀಗೆ ಸಾಕ್ಷಾತ್ಕರಿಸಿದ ವಿಘ್ನೇಶ್ವರನು, "ವ್ಯಾಸ ಮಹರ್ಷೀ ! ನಿನ್ನ ಮಹಾಭಾರತವು ಅದ್ವಿತೀಯ ಕಾವ್ಯವಾಗಿ, ಪಂಚಮವೇದವೆಂದು ಪರಿಗಣಿಸಲ್ಪಟ್ಟು, ಕೀರ್ತಿಸಲ್ಪಡುತ್ತ ಅಮರವಾಗಿರುತ್ತದೆ." ಎಂದು ಆಶೀರ್ವಾದಮಾಡಿ, ಅಂತರ್ಹಿತನಾದನು.

ವಿಘ್ನೇಶ್ವರನಿಂದ, ಅವನ ದಂತಕಂಠದಿಂದ ಬರೆಯಲ್ಪಟ್ಟು, ಅಕ್ಷರಸಿದ್ಧಿ ಹೊಂದಿದ ಮಹಾಭಾರತವು, ಎಲ್ಲಾ ಕಾಲದಲ್ಲಿಯೂ ಸಾರಸ್ವತಾಕಾಶದಲ್ಲಿರುವ ನಕ್ಷತ್ರಗಳ ನಡುವಿನ ಚಂದ್ರನಂತೆ ಚಿರಸ್ಥಾಯಿಯಾಗಿ ನಿಂತಿರುತ್ತದೆ. —(ಸಮಾಪ್ತಿ)





# ಮಂದಮತಿ

ಒಂದು ಕಾಲದಲ್ಲಿ ಲೆಬನಾನ್ ದೇಶದ ಒಂದು ಗ್ರಾಮದಲ್ಲಿ ದಂಪತಿಗಳ ಜೋಡಿಯೊಂದಿತ್ತು. ಗಂಡನ ಹೆಸರು ಹಾನೀ. ಹೆಂಡತಿಯ ಹೆಸರು ಮರಿಯಂ. ಹಾನಿ ತುಂಬಾ ಒಳ್ಳೆಯವನಾದ ದೊಡ್ಡ ಮಂದಮತಿ. ಅದರ ಮೇಲೆ ಕೆಲಸ ಮಾಡುವುದೆಂದರೆ ಗುಡ್ಡದಷ್ಟು ಉದಾಸೀನ. ಆದರೆ ಮರಿಯಂ ಹಾಗಲ್ಲ; ಬಹಳ ಗಟ್ಟಿಗಿತ್ತಿ. ಚುರುಕಿನವಳು, ಸಾಮರ್ಥ್ಯ ಉಳ್ಳವಳು. ಬುದ್ಧಿವಂತೆ. ಅವಳು ಭಾಗ್ಯವಂತರ ಮನೆಗಳಲ್ಲಿ ಕಸಮುಸುರೆ ಮುಂತಾದುವನ್ನು ಮಾಡಿ, ತನ್ನನ್ನೂ ಗಂಡನನ್ನೂ ಪೋಷಿಸುತ್ತಿದ್ದಳು. ಗಂಡನನ್ನು ಕೂಡಾ ಎಲ್ಲಿಗಾದರೂ ಹೋಗಿ ಕೆಲಸ ಮಾಡಿ ಏನಾದರೂ ಸಂಪಾದಿಸಿ ತರುವಂತೆ ಆಗಾಗ ಹೇಳುತ್ತಲೇ ಇರುವಳು, ಆದರೆ ಹಾನಿ ಅವಳ ಮಾತನ್ನು ಈ ಕಿವಿಯಿಂದ ಕೇಳಿ ಆ ಕಿವಿಯಿಂದ ಬಿಟ್ಟು, ಮುಗುಳು ನಗುತ್ತ ತನ್ನ ಪಾಡಿಗೆ ಇದ್ದು ಬಿಡುವನು.

ಒಂದು ದಿನ ಮರಿಯಂ ಏನೋ ಮೈಸರಿಯಿಲ್ಲದೆ ಕೆಲಸಕ್ಕೆ ಹೋಗಲಾಗದೆ ಹೋದಳು. ಅವಳಿಗೆ ಸುಮ್ಮನಿರುವ ಹಾನೀ ಮೇಲೆ ಬಹಳ ಕೋಪ ಬಂತು. "ಇವತ್ತು ನೀವು ಏನೋ ಒಂದು ಕೆಲಸ ಮಾಡದೆ ಹಣ ತಾರದೆ ಹೋದರೆ ನಮಗಿಬ್ಬರಿಗೂ ಉಪವಾಸದೇ ಗತಿ. ನಮ್ಮ ಗ್ರಾಮ ನಾಯಕರ ಬಳಿಗೆ ಹೋಗಿ ಏನೋ ಒಂದು ಕೆಲಸ ಮಾಡುತ್ತೇನೆಂದು ಹೇಳಿರಿ. ಅವರ ಮನೆಯ ಕೆಲಸ ಮಾಡಬೇಕಾದರೆ ಎಲ್ಲಿಗಾದರೂ ಹೋಗಬೇಕಾಗಿ ಬರುತ್ತೆ. ಕಷ್ಟವೇ ನಿಲ್ಲ" ಎಂದಳು ಗಂಡನೊಂದಿಗೆ.

ಹಾನೀಗೆ ತಾನು ಕೆಲಸ ಮಾಡಿ ಸಂಪಾದಿಸಬೇಕೆಂಬ ಹಟ ಬಂತು. ಮರುದಿನ ಬೆಳಿಗ್ಗೆ ಬೇಗನೇ ಎದ್ದು ಗ್ರಾಮ ನಾಯಕನ ಮನೆಗೆ ಹೋದನು. ಆ ಗ್ರಾಮ ನಾಯಕನಿಗೆ ಹಾನೀಯ ಮಂದಬುದ್ಧಿಯೂ, ಹೆಂಡತಿಯೇ ಅವನನ್ನು ಪೋಷಿಸುವಳೆಂಬುದೂ ಚೆನ್ನಾಗಿ ಗೊತ್ತಿತ್ತು. ಒಳ್ಳೆಯವಳಾದ ಅವಳ ಗಂಡನು ಬಂದು ಕೆಲಸ ಕೇಳಿದ ಕೂಡಲೇ ಗ್ರಾಮನಾಯಕನಿಗೆ ಅವನ ಮೇಲೆ ಕನಿಕರ ಉಂಟಾಯಿತು. ಅವನಿಗೆ ಸಹಾಯ ಮಾಡೋಣವೆಂದುಕೊಂಡು ಗ್ರಾಮ ನಾಯಕನು ಹಾನೀಯ ಕೈಗೆ ಒಂದು ಬಂಗಾರದ ದೀನಾರವನ್ನು ಕೊಟ್ಟು, ಮೊದಲು ಸಂತೆಗೆ ಹೋಗಿ ಒಂದು ಕತ್ತೆಯನ್ನು ತೆಗೆದುಕೊಂಡು ಬರಲು ಹೇಳಿದನು. ಹಾನೀ ಆ



ಪ್ರಕಾರ ಬೀರೂಟ್ ನಗರಕ್ಕೆ ಹೋಗಿ, ಅಲ್ಲಿಯ ಸಂತೆಯಿಂದ ಬಲಿಷ್ಠವಾದ ಕತ್ತೆಯೊಂದನ್ನು ಕೊಂಡು ಕೊಂಡು ಬಂದನು. ಅದು ಹಾನೀಯ ಸೌಲಭ್ಯಕ್ಕಾಗಿಯೇ ಯಜಮಾನನು ತರಿಸಿದ ಕತ್ತೆ. ಆಮೇಲೆ ಅಲ್ಲಿಯೇ ಅವರು ಹೇಳಿದ ಕೆಲಸಕ್ಕೂ ತೊಡಗಿದನು ಹಾನೀ. ಕೆಲವು ಬಾರಿ ಅವನು ಕತ್ತೆಯ ಮೇಲೆ ಕುಳಿತು ಅಂಗಡಿಗೆ ಹೋಗಿ ಬರಬೇಕಾಗುತ್ತಿತ್ತು. ಯಜಮಾನನು ಅವನಿಗೆ ಯಾವ ದಿನದ ಸಂಬಳವನ್ನು ಆ ದಿನವೇ ಕೊಟ್ಟು ಬಿಡುತ್ತಿದ್ದನು. ಇದರಿಂದ ಅವನ ಹೆಂಡತಿಗೆ ಸಂತೋಷವೆನಿಸಿತು.

ಒಂದು ದಿನ ಗ್ರಾಮನಾಯಕನು ಹಾನೀಯೊಂದಿಗೆ, "ನೀನು ಬೀರೂಟ್‌ಗೆ ಹೋಗಿ, ಬಹದ್ದೂರ್ ಅಂಗಡಿಯಿಂದ ಒಂದು ಗೋಣಿ ಅಕ್ಕಿಕೊಂಡು ಕೊಂಡು ಬಾ" ಎಂದನು.

ಆ ಅಂಗಡಿ ಎಲ್ಲಿರುವುದೆಂದು ಹಾನೀಗೆ ಗೊತ್ತಿತ್ತು. ಆ ದಿನ ಹಾನೀಗೆ ಬಹಳ ಜಡತ್ವ ಬಂದಿತ್ತು. ಕೆಲವು ದಿನ ಅವನನ್ನು ಬಿಟ್ಟು ಆಚೆಗೆ ಹೋಗಿದ್ದ ಉದಾಸೀನತೆ ಈ ದಿನ ಬಂದು ಅವನನ್ನು ಅಂಟಿಕೊಂಡಿತ್ತು. ಬೀರೂಟಿನ ವರೆಗೆ ಹೋಗಲು ಕಾಲು ಬರಲಿಲ್ಲ. ಒಂದು ಅಕ್ಕೀಗೋಣಿಯನ್ನು ತರಲು ಕತ್ತೆಯನ್ನು ಮಾತ್ರವೇ ಕಳುಹಿಸಿದರೆ ಸಾಕೆಂದು ತೋರಿತು. ಅದರೊಂದಿಗೆ ತಾನೂ ಹೋಗಿ ಶ್ರಮಪಡುವ ಅಗತ್ಯವಿಲ್ಲವೆನಿಸಿತು.

ಕೂಡಲೇ ಅವನು ಕತ್ತೆಯ ಹತ್ತಿರ ಹೋಗಿ, "ನೋಡೋ, ಕತ್ತೆಪ್ಪಾ, ಬೀರೂಟ್ ನಗರದಲ್ಲಿ ನಮ್ಮ ಬಹದ್ದೂರ್ ಅಂಗಡಿ ಗೊತ್ತಿದೆ ತಾನೇ. ಅನೇಕ ಬಾರಿ ಹೋಗಿದ್ದೇವಲ್ಲಾ ? ಅಲ್ಲಿಂದ ಒಂದು ಗೋಣೀ ಅಕ್ಕಿ ಹೊತ್ತುಕೊಂಡು ಬರುವೆಯಾ ? ಸುಮ್ಮನೆ - ನಾನೇಕೆ ನಿನ್ನೊಂದಿಗೆ ಬರಬೇಕು" ಎಂದು ಕೇಳಿದನು.

ಕತ್ತೆ ಆದರ ಅಭ್ಯಾಸದಂತೆ ತಲೆಯನ್ನು ಮೇಲಕ್ಕೂ ಕೆಳಕ್ಕೂ ಆಡಿಸಿತು. ಅದು ತನ್ನ ಮಾತನ್ನು ಅರ್ಥ ಮಾಡಿಕೊಂಡಿತೆಂದೂ, ತಾನು ಹೇಳಿದ ಕೆಲಸ ಮಾಡಲು ಒಪ್ಪಿಕೊಂಡಿತೆಂದೂ ತಿಳಿದು ಹಾನೀ ಬಹಳ ಸಂತೋಷಪಟ್ಟನು. ಅವನು ಕತ್ತೆಯ ತಲೆಯ ಮೇಲೆ ಒಂದು ಮುಂಡಾಸು ಸುತ್ತಿ, ಅದರ ಮಡಿಕೆಯಲ್ಲಿ ಯಜಮಾನನು ಕೊಟ್ಟ ದೀನಾರವನ್ನೂ, ಅಕ್ಕಿಯ ಚೀಟನ್ನೂ ಇಟ್ಟು, ಕತ್ತೆಯನ್ನು ಬೀರೂಟ್ ನಗರದ ರಾಜಬೀದಿಯಲ್ಲಿ ಮುಂದಕ್ಕೆ ದೂಡಿ, ಅದು ಕಣ್ಮರೆಯಾಗುವ ವರೆಗೂ ನೋಡಿ, ಅಲ್ಲಿಂದ ಸೀದಾ ತನ್ನ ಮನೆಗೆ ಬಂದು ಬಿಟ್ಟನು,

ತನ್ನ ಗಂಡ ಕೆಲಸದ ಹೊತ್ತಿನಲ್ಲಿ ಮನೆಗೆ ಬಂದುದನ್ನು ನೋಡಿ, ಅವನ ಹೆಂಡತಿ ಕಾರಣ ತಿಳಿದು ತಲೆಯ ಮೇಲೆ ಗುಡ್ಡವೇ ಬಿದ್ದ ಹಾಗೆ "ಅಯ್ಯೋ!" ಎಂದು ಗಾಬರಿ ಬಿದ್ದಳು.

"ಅದಕ್ಕೇಕೆ ಹೀಗೆ ಕೂಗುತ್ತೀ ? ಕತ್ತೆಗೆ ಎಲ್ಲವೂ ಗೊತ್ತಿದೆ. ಮೊದಲು ಕೇಳಿದ್ದಕ್ಕೆ ಒಪ್ಪಿಗೆ ಕೊಟ್ಟಿತು,

ಅದು ಒಪ್ಪಿದ್ದರಿಂದಲೇ, ಎಲ್ಲಾ ಅದಕ್ಕೆ ಒಪ್ಪಿಸಿ ಕೊಟ್ಟೆ. ಸುಮ್ಮನೆ ನಾನೂ ಏಕೆ ನಡೆದು ಕಷ್ಟಪಡಬೇಕು ? ಒಡೆಯರು ಒಳ್ಳೆಯವರು. ಏನೂ ಹೇಳಲಿಕ್ಕಿಲ್ಲ " ಎಂದನು ಹಾನೀ.

" ಎಂಥಾ ಬುದ್ಧಿಗೇಡೀ ಮೊದ್ದು ಸ್ವರೂಪದವರೋ ! ಬಂಗಾರದ ದೀನಾರವೂ ಹೋಯಿತು, ಕತ್ತೆಯೂ ಹೋಯಿತು. ಮೊದಲು ಹೋಗಿ ಕತ್ತೆಯನ್ನು ಹುಡುಕಿರಿ. ಬೀರೂಟ್ ಬೀದಿಯಲ್ಲೇ ಹೋಗಿ, ಆ ಕತ್ತೆಯನ್ನೂ, ಅಕ್ಕೀ ಗೋಣಿಯನ್ನೂ ತಾರದೆ ಮನೆಗೆ ಮಾತ್ರ ಬರಕೂಡದು ! ಸುಮ್ಮನೆ ಬಂದರೆ ನೀರು ಸಹಾ ಕೊಡಲಾರೆ, ನಡೀರಿ! ಓಡಿರಿ!" ಎಂದು ಮರಿಯಂ ಕೋಪದಿಂದ ಗುಡುಗುಡಿಸಿದಳು.

ಹಾನಿ ಮನೆಯಿಂದ ಓಡುತ್ತಾ ಹೋಗಿ ಬೀರೂಟ್ ಬೀದಿಯನ್ನು ಹಿಡಿದನು, ಆಯಾಸದಿಂದ ಕಾಲು ನಡುಗಿ ಬಾಯೊಣಗಿ ಕಣ್ಣು ಕತ್ತಲೆಯಾಗುವವರೆಗೂ ಓಡಿದನು. ಆ ಕತ್ತೆ ಮಾತ್ರ ಕಾಣಿಸಲೇ ಇಲ್ಲ.

ಅವನು ಬೀರೂಟ್ ನಗರಕ್ಕೆ ಹೋಗಿ ವಾಡಿಕೆಯ ಬಹದ್ದೂರ್ ಅಂಗಡಿಯನ್ನು ಹೊಕ್ಕು, " ನಮ್ಮ ಕತ್ತೆ ಬಂದು ನಿಮ್ಮ ಹತ್ತಿರ ಅಕ್ಕೀ ಗೋಣಿ ಕೇಳಿ ತೆಗೆದುಕೊಂಡಿತೆ ? ಇಷ್ಟರವರೆಗೂ ಅದು ಮನೆಗೆ ಬರಲೇ ಇಲ್ಲ !" ಎಂದು ಅಲ್ಲಿಯ ವ್ಯಾಪಾರಿಯನ್ನು ಕೇಳಿದನು.

ವ್ಯಾಪಾರಿ ಹಾನೀಯ ಮುಖವನ್ನು ಚೆನ್ನಾಗಿ ನೋಡಿದನು. ಅವನು ಮಂದಮತಿಯೆಂಬುದನ್ನು ತಿಳಿದು, ಅವನಿಂದ ಸ್ವಲ್ಪ ಹಾಸ್ಯರಸ ಅನುಭವಿಸೋಣವೆಂದುಕೊಂಡು, " ಹೌದೌದು. ಬೆಳಿಗ್ಗೆ ಕತ್ತೆ ಬಂದಿತ್ತು. ಆದರೆ ಅದಕ್ಕೆ ನಮ್ಮ ಅಂಗಡಿಯ ಅಕ್ಕಿ ಹಿಡಿಸಲಿಲ್ಲ. ಆದ್ದರಿಂದ ಅದು ಅಲ್ಲಿ ಕಾಣುವ ಆ ಅಂಗಡಿಗೆ ಹೋಯಿತು." ಎಂದು ಇದಿರುಗಡೆಯಲ್ಲಿದ್ದ ಇನ್ನೊಂದು ಅಂಗಡಿಯನ್ನು ತೋರಿಸಿದನು.

ಹಾನೀ ಆ ಅಂಗಡಿಯ ಕಡೆಗೆ ಹೋಗುವಾಗ, ಬಹದ್ದೂರ್ ಅಂಗಡಿಯವನು ಎರಡನೇ ಅಂಗಡಿಯವನಿಗೆ ಹಾನೀಯನ್ನು ತೋರಿಸಿ ಸನ್ನೆ





ಮಾಡಿದನು. ಎರಡನೇ ಅಂಗಡಿಯವನು ಆ ಸೈಗೆಗಳನ್ನು ಅರ್ಥಮಾಡಿಕೊಂಡು, ಹಾನೀ ತನ್ನ ಅಂಗಡಿಗೆ ಬಂದಕೂಡಲೇ, "ಏನು ಬೇಕು?" ಎಂದು ಕೇಳಿದನು.

ಹಾನೀ ಮೊದಲನೇ ಅಂಗಡಿಯವನನ್ನು ಕೇಳಿದಂತೆಯೇ ಅವನೊಂದಿಗೆ ಕೂಡಾ, "ನಮ್ಮ ಕತ್ತೆ ಇಲ್ಲಿಗೆ ಬಂದು ಒಂದು ಅಕ್ಕಿ ಗೋಣಿಯನ್ನು ಕೊಂಡುಕೊಂಡಿತೇ ? ಕೊಟ್ಟು ಕಳುಹಿಸಿದ್ದೀರಾ ?" ಎಂದು ಕೇಳಿದನು.

"ಹೌದು, ನಿಮ್ಮ ಕತ್ತೆ ಇಲ್ಲಿಗೆ ಬಂತು, ಅದಕ್ಕೆ ಈ ಬೀರೂಟಿನ ಅಕ್ಕಿಯಾವುದೂ ಹಿಡಿಸಲಿಲ್ಲವಂತೆ. ಜಾಫಾ ನಗರದಲ್ಲಿ ಒಳ್ಳೇ ಅಕ್ಕಿ ಇದೆ. ಎಂದು ಕೊಂಡು ಅಲ್ಲಿಗೆ ಹೋಗಿದೆ" ಎಂದನು ಆ ಎರಡನೇ ವರ್ತಕ.

ಅದನ್ನು ಕೇಳಿ ಹಾನೀಗೆ ಗಾಬರಿಯಾಯಿತು. ತಾನು ಜಾಫಾಕ್ಕೆ ಹೋಗಿ ಕತ್ತೆಯನ್ನು ತಾರದಿದ್ದರೆ ಹೆಂಡತಿ ಮನೆಗೆ ಕಾಲಿಡಲು ಬಿಡಲಾರಳು. ಅದುದರಿಂದ ಅವನು ಆ ವರ್ತಕನ ಹತ್ತಿರವೇ ಒಂದು ದೀನಾರವನ್ನು ಸಾಲ ಕೇಳಿ ತೆಗೆದುಕೊಂಡು ಜಾಫಾಕ್ಕೆ ಹೋದನು.

ಅವನು ಜಾಫಾದ ಅಂಗಡಿ ಬೀದಿಗಳಲ್ಲಿ ತನ್ನ ಕತ್ತೆಯನ್ನು ಹುಡುಕುತ್ತಾ ತಿರುಗಿ ಬೇಸತ್ತನು. ಕತ್ತೆಯನ್ನು ಎಲ್ಲಿಯೂ ಕಾಣದೆ, ದಾರೀ ಹೋಕನೊಬ್ಬನನ್ನು ತಡೆದು ನಿಲ್ಲಿಸಿ, ಆ ನಗರದೊಳಗೆ ದೊಡ್ಡದಾದ ಅಕ್ಕಿಯ ಅಂಗಡಿ ಎಲ್ಲಿದೆಯೆಂದು ಕೇಳಿ ತಿಳಿದು ಕೊಂಡನು.

ಕಡೆಗೆ ಅವನು ಆ ದೊಡ್ಡ ಅಂಗಡಿಯನ್ನು ಪ್ರವೇಶಿಸಿ, "ನಮ್ಮ ಕತ್ತೆ ನಮ್ಮ ಯಜಮಾನರಿಗಾಗಿ ಅಕ್ಕಿ ಗೋಣಿಕೊಂಡು ಕೊಳ್ಳಲು ಇಲ್ಲಿಗೆ ಬಂತೇನು ?" ಎಂದು ಕೇಳಿದನು.

ಆ ಅಂಗಡಿಯ ಒಡೆಯನಿಗೆ, ಆ ಊರಿನ ಪ್ರಧಾನ ನ್ಯಾಯಾಧಿಕಾರಿಯ ಮೇಲೆ ಯಾವುದೋ ಹಳೆಯ ಹಗೆ ಇದ್ದಿತು. ಹಾನೀಯ ಪ್ರಶ್ನೆಯನ್ನು ಕೇಳಿದ ಕೂಡಲೇ, ಆ ನ್ಯಾಯಾಧಿಕಾರಿಯ ಮೇಲೆ ಹಗೆ ತೀರಿಸಿಕೊಳ್ಳಲು, ಇವನನ್ನು ಉಪಯೋಗಿಸಬಹುದೆಂದು ಆ ವರ್ತಕನಿಗೆ ತೋರಿತು. ಅಂತಲೇ ಅವನು ಹಾನೀಯೊಂದಿಗೆ ಸ್ನೇಹಪೂರ್ವಕವಾಗಿ, "ಸ್ವಲ್ಪ ಹೊತ್ತಿನ ಮೊದಲು ನಿಮ್ಮ ಕತ್ತೆ ನಮ್ಮ ಅಂಗಡಿಗೆ ಬಂದುದೇನೋ ನಿಜವೇ. ಅದು ಅಕ್ಕಿಯ ಬೆಲೆಯ ವಿಷಯದಲ್ಲಿ ನನ್ನೊಂದಿಗೆ ಚೌಕಾಸಿ ಮಾಡಿತು. ಅಂಗಡಿಯಲ್ಲಿ ಇದೇನು ರಗಳೆಯೆಂದು ಜನರು ಗುಂಪು ಕೂಡಿ ಬಿಟ್ಟರು. ನಿಮ್ಮ ಕತ್ತೆಯ ಬುದ್ಧಿವಂತಿಕೆಯನ್ನು ನೋಡಿ, ಜನರೆಲ್ಲ ಬಹಳ ಮೆಚ್ಚಿಕೊಂಡು, ಆ ಕತ್ತೇರಾಯನನ್ನು ಒತ್ತಾಯ ಪಡಿಸಿ ನ್ಯಾಯಾಧಿಕಾರಿಯಾಗಿರಬೇಕೆಂದು ಕೇಳಿಕೊಂಡರು. ದೊಡ್ಡ ಮನಸ್ಸಿನ ಆ ಕತ್ತೆಯವರು ಜನರ ಮೇಲೆ ಕನಿಕರ ತೋರಿ, ಮನುಷ್ಯ ರೂಪತಾಳಿ,

ಈಗ ನ್ಯಾಯಾಸ್ಥಾನದಲ್ಲಿ ತೀರ್ಪು ಹೇಳುತ್ತಾ ಇದ್ದಾರೆ. ಬನ್ನಿ" ಎಂದು ಹೇಳಿ ಆ ವರ್ತಕನು ಹಾನೀಯನ್ನು ನ್ಯಾಯಾಸ್ಥಾನದ ಬಾಗಿಲ ವರೆಗೂ ಕರೆದೊಯ್ದು, ನ್ಯಾಯಾಧಿಕಾರಿ ಎಲ್ಲಿ ಕುಳಿತಿರುವ ನೆಂಬುದನ್ನೂ ಹೇಳಿದನು.

ಅಲ್ಲಿ ನಿಂತಿದ್ದ ಹಾನೀಗೆ ಒಂದು ಸಂದೇಹ ಬಂತು. ಈಗ ದೊಡ್ಡ ಪದವಿ ಸಂಪಾದಿಸಿದ ಕತ್ತೆ, ತಾನು ಕರೆದುಕೂಡಲೇ ಬರಲಾರದೇನೋ? ಅದಕ್ಕಾಗಿ ಅವನು ಅತ್ತ ಹೋಗಿ, ಒಂದು ಮೂಲಂಗಿ ಸೊಪ್ಪಿನ ಕಟ್ಟನ್ನು ಕೊಂಡು ಕೊಂಡು ಬೇಗಬೇಗನೆ ಬಂದನು. ಆದರೆ ಬಾಗಿಲಿನಲ್ಲಿದ್ದ ಕಾವಲಿನವರು ಅವನನ್ನು ಒಳಗೆ ಬಿಡದೆ ತಡೆದರು. ಹಾನಿ ಸುಮ್ಮನಿರದೆ ಅವರೊಂದಿಗೆ ತಕರಾರು ತೆಗೆದನು.

ಈ ಜಗಳಾಟವನ್ನು ನೋಡಿ ನ್ಯಾಯಾಧಿಕಾರಿ ಅದೇನೆಂದು ಕೇಳಿದನು. ಹಾನೀ ಹೇಳುತ್ತಿದ್ದ ಮಾತನ್ನು ಕಾವಲಿನವರು ನ್ಯಾಯಾಧಿಕಾರಿಯೊಂದಿಗೆ ಹೇಳಿದರು. ಇದು ತನ್ನ ಮೇಲೆ ಹಗೆ ತೊಟ್ಟ ಅಕ್ಕೀ ಅಂಗಡಿಯವನ ಕೆಲಸವೇ ಆಗಿರಬೇಕೆಂದು ನ್ಯಾಯಾಧಿಪತಿಗೆ ಗೊತ್ತಾಯಿತು. ಆತನು ಕೋಪ ವನ್ನು ನಿಗ್ರಹಿಸಿಕೊಂಡು ಹಾನೀಯನ್ನು ಒಳಗೆ ಕಳುಹಿಸಲು ಹೇಳಿದನು.

ಹಾನೀ ಒಳಗೆ ಬಂದು ತನ್ನ ಕೈಯಲ್ಲಿದ್ದ ಮೂಲಂಗಿ ಸೊಪ್ಪಿನ ಕಟ್ಟನ್ನು ಆಡಿಸುತ್ತ, "ಓಹೋ! ನ್ಯಾಯಾಧಿಕಾರಿಯ ದುಸ್ತಿನಲ್ಲಿರುವ ನನ್ನ ಕತ್ತೇ. ನಿನಗೆ ಇಷ್ಟು ದೊಡ್ಡ ಪದವಿ ಬಂದದ್ದು ನೋಡಿ ಸಂತೋಷವಾಗುತ್ತೆ. ನಿನ್ನ ಮುಂಡಾಸಿನಲ್ಲಿ ನಾನಿಟ್ಟ ದೀನಾರಾ ಏನಾಯಿತು?" ಎಂದನು.

ಹಾನೀ ಕೇವಲ ಮಂದಮತಿಯೆಂದು ನ್ಯಾಯಾ ಧೀಶನಿಗೆ ತಿಳಿದು ಹೋಯಿತು. ಅವನು ಸೌಮ್ಯ ವಾಗಿ "ಆ ಕತ್ತೆಯ ಬೆಲೆ ಎಷ್ಟಾಗಿತ್ತು. ಗೊತ್ತಿದೆಯೆ?" ಎಂದು ಕೇಳಿದನು. "ಒಂದು ದೀನಾರ ಕೊಟ್ಟು ನಾನೇ ಕೊಂಡು ಕೊಂಡದ್ದು." ಎಂದ ಹಾನೀ.

ನ್ಯಾಯಾಧಿಕಾರಿ ಅವನಿಗೆ ನಾಲ್ಕು ಬಂಗಾರದ ದೀನಾರಗಳನ್ನು ಕೊಟ್ಟು, ಮೊದಲಿನ ಕತ್ತೆಯನ್ನು ಮರೆತು ಮನೆಗೆ ಹೋಗಲು ಹೇಳಿದನು.

"ಬದುಕಿದೆನಪ್ಪಾ" ಎಂದುಕೊಂಡು ಹಾನೀ, ಮತ್ತೊಂದು ಕತ್ತೆಯನ್ನು ಕೊಂಡುಕೊಂಡು, ಒಂದು ಚೀಲ ಅಕ್ಕಿಯನ್ನು ಅದರ ಮೇಲೆ ಹೇರಿ, ತನ್ನ ಯಜಮಾನನಿಗೆ ಒಪ್ಪಿಸಿ, ತನ್ನ ಮನೆಗೆ ಬಂದು, ನಡೆದ ಸಂಗತಿಯನ್ನೆಲ್ಲಾ ಹೆಂಡತಿಯೊಡನೆ ಹೇಳಿದನು. ಮಂದಮತಿ ಹಾನೀಯ ಅದೃಷ್ಟ ಗಟ್ಟಿ ಇದ್ದುದಕ್ಕೆ ಅವಳೂ ಸಂತೋಷಪಟ್ಟಳು.



## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೫೦

**ಗೆದ್ದ ಶೀರ್ಷಿಕೆಗಳು ೧೯೮೩ ಮಾರ್ಚಿ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ.**



Pranlal K. Patel



Devidas Kasbekar

★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು.

★ ಜನವರಿ ೧೫ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ.

★ ನಮಗೆ ಬಂದ ಶೀರ್ಷಿಕೆಗಳಲ್ಲಿ ಅತ್ಯುತ್ತಮವಾದ ಒಂದು ಜತೆಗೆ ರೂ. ೫೦ ಬಹುಮಾನ.

★ ಶೀರ್ಷಿಕೆಗಳನ್ನು ಪೋಸ್ಟ್‌ಕಾರ್ಡಿನಲ್ಲೇ ಬರೆಯಬೇಕು. ಆದರಲ್ಲಿ ಬೇರೆ ವಿಷಯ ಬರೆಯಬಾರದು. ವಿಳಾಸ : ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು-೬೦೦೦೨೬

---

## ನವಂಬರ್ ಸ್ಪರ್ಧೆಯ ಫಲಿತಾಂಶ :

ಮೊದಲನೇ ಫೋಟೋ : **ಉಪ್ಪಿನ ಮೂಟೇನೀರಿಗೆ ಬಿದ್ರೆ ಕರಗೇ ಹೋಗುತ್ತೆ**

ಎರಡನೇ ಫೋಟೋ : **ಕಪ್ಪೆ ಕಾಲಾಡಿ ಕೌಚಿ ಬಿದ್ರೆ ಹಾಗೇ ತೇಲುತ್ತೆ**

ಕಳುಹಿಸಿದವರು : ಮಂಜುಳಾ, ಎನ್. ಎ. ೪೫೬, ಬೆಂಗಳೂರು-೧೩.

ಬಹುಮಾನ ರೂ. ೫೦/- ಈ ತಿಂಗಳ ಆಖೈರಿನೊಳಗೆ ಕಳುಹಿಸಲಾಗುವುದು

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 188, Arcot Road, Madras-600 026 (India). Controlling Editor: NAGI REDDI.

# ರಾಜ-ರಾಣಿ ಆಟ










ಕೆನರಾ ಬ್ಯಾಂಕಿನ ಕೌಂಟರ್ ಬಳಿ ಯಾರು ಮೊದಲು ಹೋಗುವಿರಿ ? ಮೂರು ಜನರಿಗಾಗಿ ರೂಪಿಸಲಾಗಿರುವ, ಒಂದು ಸರಳವಾದ, ಕುತೂಹಲಕರವಾದ ಆಟ. ನಿಮಗೆ ಬೇಕಾಗಿರುವುದೆಂದರೆ ಕೇವಲ ಕೆಲವೇ ನಾಣ್ಯಗಳು ಪಾಲ್ಗೊಳ್ಳವರೆ ಅತ್ಯುತ್ತಮ ಮತ್ತು ಮೂರು ಕಾಯಿಗಳು.

ಆಟದ ನಿಯಮಗಳಿಗಾಗಿ ಪಕ್ಕದ ಪುಟ ನೋಡಿರಿ.





ಕೆನರಾ ಬ್ಯಾಂಕ್
(ಒಂದು ರಾಷ್ಟ್ರೀಕೃತ ಬ್ಯಾಂಕ್)

